# ಸಪ್ತಗಿರಿ

ಬೆಲೆ : ರೂ ೧

ಜುಲೈ 1988










ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ

## THE VICE-PRESIDENT VISITS TIRUMALA



The Vice President Dr. Shankar Dayal Sharma is seen planting a croton at Tirumala.





Sri Shankar Dayal Sharma visits and worships 'Narayanagiri Padam'.



The Vice President is seen with the T.T.D. Officials and Minister for Endow-



ಶಿರಿಯ ಮದವೇ ಮುಕುಂದ ನಿನ್ನ
ಚರಣ ಸೇವಕನ ಬಿನ್ನಹ ಪರಾಕೆಲೋ ದೇವ ॥ ಪ ।

ಸಕಲೈಶ್ವರ್ಯದ ಶಿರಿದೇವಿ ನಿನ್ನರಸಿ ಬಹು
ಯುಕುತಿಯಿಂದಲಿ ಲೋಕ ಪುಟ್ಟಿಸುವ
ಶಕುತ ನಿನ್ನ ಹಿರಿಯ ಮಗನು ಪ್ರಾಣಿಗಳ ಮೋ
ಹಕದಿ ಮರುಳು ಮಾಳ್ಪ ಕಿರಿಯ ಮಗ ನಿನಗಿಹನು –1–

ಶೇಷನ ಹಾಸಿಗೆ ಗರುಡತುರಗವು ಪೀತ
ವಾಸದುಡುಗೆಯು ಕೊರಳಲಿ ವೈಜಯಂತಿ
ಮೀಸಲಳಿಯದ ಪುಷ್ಪಮಾಲೆ ಧರಿಸಿ ಜಗ
ಜಗದೀಶನೆಂಬ ಬಿರುದ ಪೊಗಳಿಸಿ ಕೊಳುತಿಪ್ಪೆ –2–

ಅಷ್ಟದಿಕ್ಪಾಲಕರ ಮಧ್ಯದಲಿ ವೈಕುಂಠ
ಪಟ್ಟಣದ ಐಶ್ವರ್ಯ ದೋಲಗವು ನಿತ್ಯ
ಇಷ್ಟ ಓಲೈಸುವ ಗಾಯನದಲಿ ನಿಂತು
ಗಟ್ಟಿ ಪಾಡುವ ತುಂಬುರ ನಾರದರು ಸಂಭ್ರಮದಿ –3–

ಬಲ್ಲಿದರಿಗೆಲ್ಲ ಬಲ್ಲಿದನೆಂಬ ಅರಿಕ್ಷ್ರದಯು
ದಲ್ಲಣನೆಂಬ ಧೈರ್ಯವು ಸಾಹಸ
ಇಲ್ಲವೆನಗಾರು ಸರಿಯೆಂಬ ಗರ್ವದಿ ಎನ್ನ
ಸೊಲ್ಲು ಕಿವಿಕೇಳದಂತಾಯಿತೆ ಹರಿಯೆ –4–

ಭಕ್ತ ವತ್ಸಲನೆಂಬ ಬಿರುದು ಬೇಕಾದರೆ
ಶಕುತ ಸುಮ್ಮನೆ ಕಾಯೋ ಸುಲಭದಿಂದ
ಸುಕೃತ ಶರಣರು ನಿಮ್ಮ ನೆನೆವರೈ ಶೇಷಗಿರಿ
ಪ್ರಕಟವಾಸಾದಿ ಕೇಶವ ವೆಂಕಟೇಶ –5–

— ಶ್ರೀ ಕನಕದಾಸರು.







ಓಂ ಶ್ರೀ ಮಾತ್ರೇ ನಮಃ

ಫೋನ್ :
ಕಛೇರಿ : 472013
ಮನೆ : 861254

# ನವಶಕ್ತಿ ನಿಲಯ ದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರು ಮಾಡುವ ಸಂಸ್ಥೆ.

1. ಶ್ರೀಚಕ್ರ ಮಹಾಮೇರು (ಪಂಚಲೋಹ)
   16×16 cm ಹಾಗೂ 10×10cm
   4½ × 4½ cm. ರೂ. 350–00
2. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130–00
   (ತಾಪತ್ರಯಗಳನ್ನು ದೂರಮಾಡುವುದು)
3. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
   24×24 cm ರೂ. 1100–00
   (3ತಲೆಮಾರು ಪ್ರಭಾವಬೀರಿ, ಸಂತಸ ಸಂಪತ್ತು ಸುಖ ನೀಡುವುದು)
4. ಶ್ರೀಚಕ್ರ (ಸರ್ವದೇವತೆಗಳೊಂದಿಗೆ)8×8cm ರೂ. 130–00
5. ಸರ್ವಜನ ಮನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
   ಶ್ರೀ ಮಹಾಸುದರ್ಶನಂ 16×48 cm ರೂ. 1650–00
   (ವ್ಯವಹಾರ, ಸಂಪತ್ತು, ಸಂತಸ, ಶಾಂತಿ ಅಭಿವೃದ್ಧಿಗೆ, ಕೆಟ್ಟ ಕಣ್ಣಿನ ದೋಷ ನಿವಾರಣೆಗೆ)
6. ಸರ್ವಜನ ಮನಧನ ಆಕರ್ಷಣ ಸಾಮ್ರಾಜ್ಯಲಕ್ಷ್ಮಿ
   ಶ್ರೀ ಮಹಾಸುದರ್ಶನ ಯಂತ್ರ 8×24 cm ರೂ. 450–00
   (ಮೇಲಿನಂತೆಯೇ)
7. ಶೂಲಿನಿ, ಶರಭೇಶ್ವರ, ಪ್ರತ್ಯಂಗಿರ
   (ಮೂರೂ ಯಂತ್ರಗಳನ್ನು ಒಂದೆಡೆಯಿಟ್ಟಲ್ಲಿ ನವಗ್ರಹದೋಷ ನಿವಾರಣೆ, ಶತ್ರು ಪ್ರಭಾವ ನಾಶ, ಸಂತಸ ಸುಖ, ಹೆಚ್ಚುವುದು)
   16×48 cm ರೂ. 1650–00
   8 × 24 cm ರೂ. 450–00
8. ರಸಮಣಿ, ಪ್ರತಿಯೊಂದೂ ರೂ 250/–, ರೂ 350/–,
   ರೂ 500–00
   (ಏಕಾಗ್ರತೆಗೆ ದೋಹದಕಾರಿ, ಆರೋಗ್ಯವರ್ಧಕ, ಜರಾನಿರೋಧಕ)
9. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ,
   (ಅಪಘಾತ, ಶತ್ರುಗಳಿಂದ ರಕ್ಷಣೆಗೆ) ರೂ 65–00
10. ಕಾಮಾಕ್ಷಿ ಶ್ರೀಚಕ್ರ ಪದಕ ರೂ. 65–00
    (ಯಶಸ್ಸು, ಸಂಪತ್ತು ಅಭಿವೃದ್ಧಿಗಳಿಗೆ)
11. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ. 65–00
    (ಅಭೀಷ್ಟ ಸಿದ್ಧಿಗಾಗಿ)
12. ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65–00
    (ಸುಖೀ ದಾಂಪತ್ಯ, ಪತಿ ಆಯುಷ್ಯಕ್ಕೆ)
13. ವಿವಾಹಪ್ರಾಪ್ತಿ ಪದಕ ರೂ. 65–00
    (ಶೀಘ್ರ ವಿವಾಹಕ್ಕಾಗಿ)
14. ಶ್ರೀಚಕ್ರಂ–ಲಕ್ಷ್ಮಿ ಬೀಜದೊಡನೆ ರೂ. 65–00
    (ಅಂಬಾಳ್ ಅನುಗ್ರಹಕ್ಕಾಗಿ)
15. ದೃಷ್ಟಿನಿವೃತ್ತಿ ಯಂತ್ರ ರೂ. 65–00
    (ಮನೆಯಲ್ಲಿ ವ್ಯವಹಾರದ ಸ್ಥಳದಲ್ಲಿ ಚೌಕಟ್ಟು ಹಾಕಿಡುವುದು)
16. ದತ್ತಾತ್ರೇಯ ಯಂತ್ರ 12×12 cm ರೂ. 150–00
    (ಕೆಟ್ಟಕಣ್ಣು ದೋಷ ಪರಿಹಾರಕ್ಕೆ)
17. ರುದ್ರಾಕ್ಷಮಾಲೆ, ತುಲಸೀಮಾಲೆ, ಸ್ಫಟಿಕಮಾಲೆ, ವಿದ್ಯುದೀಕೃತ ತಾಮ್ರದಕಡಗ,
18. ಶ್ರೀ ಭುವನೇಶ್ವರೀ ದೇವಿ ಚಿತ್ರ30×20 cm ರೂ. 20–00

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ ಗೃಹ ಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಅಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ 105/– ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ ಕ್ಯಾಟಲಾಗ್ ಉಚಿತ, ವಿದೇಶೀ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು



**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'





ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ

ಸಂಪುಟ ೧೯] ಜುಲೈ ೧೯೮೮ [ಸಂಚಿಕೆ ೩

# ವಿಷಯಸೂಚಿ



ಮುಖಚಿತ್ರ : ತಿರುಮಲೆಯಲ್ಲಿ ಪವಿತ್ರೋತ್ಸವ.

ಹಿಂಬದಿಯಲ್ಲಿ : ಆನಿವರ ಆಸ್ಥಾನದ ದಿನದಂದು ನಡೆಯುವ ಪುಷ್ಪಪಲ್ಲಕಿ

ಒಳಗಡೆ : ತಿರುಮಲೆಯಲ್ಲಿ ಭಾರತದ ಉಪರಾಷ್ಟ್ರಪತಿ ಡಾ॥ ಶಂಕರದಯಾಳಶರ್ಮ ತಿರುಪತಿ ಜೀಯರ್ ಮಠದ ದೊಡ್ಡ ಜೀಯರ್ ಶ್ರೀ ಶ್ರೀ ಗೋವಿಂದ ರಾಮಾನುಜ ಸ್ವಾಮಿಗಳು ಹಾಗೂ ಕಿರಿಯ ಜೀಯರ್ ಶ್ರೀಶ್ರೀ ಶ್ರೀನಿವಾಸಾಚಾರ್ಯ ಸ್ವಾಮಿಗಳು

# ಸಂಪಾದಕೀಯ

ವರ್ಷಕ್ಕೊಮ್ಮೆ ಗುರುಪೂಜೆ ಮಾಡುತ್ತೇವೆ. ವೇದಗಳನ್ನು ವಿಭಾಗಿಸಿ, ಮಹಾಭಾರತ, ಬ್ರಹ್ಮ ಸೂತ್ರಗಳನ್ನು ಭಾಗವತವನ್ನು ಬರೆದು ಭಾರತೀಯ ಜ್ಞಾನ ವಿಶ್ವಕೋಶವಾದ ಕೃಷ್ಣದ್ವೈಪಾಯನ ವ್ಯಾಸರನ್ನು ಭಾರತೀಯರೆಲ್ಲ ಗುರುವೆಂದು ಭಾವಿಸಿ, ಪರಂಪರೆಯಿಂದ ಪೂಜಿಸುತ್ತ ಬಂದಿದ್ದಾರೆ. ಆತ ಹೇಳದ ವಿಷಯವಿಲ್ಲ. ಸ್ವತಃ ಸಿದ್ಧನಾದರೂ ಸುತ್ತಲ ಜನರಿಗಾಗಿ, ಅವರ ಉದ್ಧಾರಕ್ಕಾಗಿ, ಧರ್ಮಮಾರ್ಗ ಪ್ರಸಾರಕ್ಕಾಗಿ. ಸರ್ವ ಕಾಲದಲ್ಲೂ ಜೀವ ತೇಯ್ದ ಆ ಮಹಾಪುರುಷನನ್ನು ಗುರುವೆನ್ನುವುದು ಇಂದೂ ಸಂಗತವೇ ಆಗಿದೆ

ಗುರು ಎನ್ನುವುದು ರಕ್ತ ಮಾಂಸ, ಮಿದುಳು, ಬುದ್ಧಿ ಹೊಂದಿದ ಕೃಷ್ಣದ್ವೈಪಾಯನ ವ್ಯಾಸರೆಂಬ ವ್ಯಕ್ತಿಮಾತ್ರವೇನಲ್ಲ. ವರ್ಣಮಾತ್ರಂ ಕಲಿಸಿದಾತಂ ಗುರು-ಎಂದು ಮುಡಿಗೇರಿಸಿ ನಮಿಸುವ ಪರಂಪರೆ ಭಾರತೀಯರದ್ದು. ಕಾರಣ ಮುಕ್ತಿಗೆ ಗುರು ಮಾರ್ಗದರ್ಶಿ ಆಗುವನೆಂಬ ನಂಬಿಕೆ, ಗಟ್ಟಿ ನಿರ್ಧಾರ. ಗುರುವಿನ ಗುಲಾಮನಾಗದನಕ ದೊರೆಯದಣ್ಣ ಮುಕುತಿ-ಎಂದು ದಾಸರು ಹಾಡಿದ್ದು ಈ ನಂಬಿಕೆ ನಿರ್ಧಾರಗಳಿಂದಲೇ. ಎಂದಾಗ ಗುರು ಎಂಬುದು ಒಂದು ತತ್ತ್ವವಾಗಿ ಕಂಡುಬರುತ್ತದೆ ಆಗ ಭಾರತೀಯರೆಲ್ಲರ ಬಹು ಶತಮಾನಗಳ ಗುರುವಾಗಿ ಸರ್ವರಿಗೂ ಸನ್ನಿಹಿತರಾಗಿ, ಸ್ನೇಹಿತ, ಬಂಧು, ಉದ್ಧಾರಕರಾಗಿ ವೇದವ್ಯಾಸರು ಗೌರವಾರ್ಹ ತತ್ತ್ವವಾಗುತ್ತಾರೆ.

ತಂದೆ ತಾಯಿಗಳನ್ನು ದೈವವೆಂದು ಕರೆದು ಗುರುವನ್ನೂ ಅದೇ ಮಟ್ಟಕ್ಕೇರಿಸಿದರೂ ತಂದೆಗೂ ಗುರುವಿಗೂ ಒಂದು ಅಂತರವಕ್ಕು ಎಂದು ಹೇಳುತ್ತಾನೆ ಸರ್ವಜ್ಞ. ಮುಕ್ತಿಮಾರ್ಗವನ್ನು, ಉದ್ಧಾರದ ಹಾದಿಯನ್ನು ತೋರುವವ ಗುರು ಎಂಬುದು ಅವನ ಅನ್ನಿಸಿಕೆ. ಹೇಗೇ ಇದ್ದರೂ ಬದುಕುವ ಹಾದಿಯಲ್ಲಿ ಮನುಷ್ಯನಿಗೆ ಶಿಸ್ತು ಸಲಿಗೆಗಳೆರಡನ್ನೂ ಒಟ್ಟಿಗೆ ತೋರಿಸಿ ಉತ್ಥಾನದ ಮಾರ್ಗದಲ್ಲಿ ಕರೆದೊಯ್ಯುವವನು ಗುರು

ಇಂತಹ ಗುರುವನ್ನು ಗೌರವಿಸಬೇಕಾದದ್ದು ಕರ್ತವ್ಯ. ಆದರೆ_ಕಲಿಯುಗದಲ್ಲಿ ಗುರು ಶಿಷ್ಯನಿಗೆ ವಂದಿಸಿ ಕಲಿಸಿದೊಡೆ ಅಹುದೆನ್ನಬೇಕು ಎಂಬ ಶರಣವಚನ 20 ನೇ ಶತಮಾನದ ಕಡೆಯ ಘಟ್ಟದಲ್ಲಿರುವ ಇಂದಿಗೂ ನಿಜವೆನ್ನುವಂತೆಯೇ ಇದೆ. ಹೀಗಾಗಲು ಕಾರಣ ನಮ್ಮಲ್ಲಿನ ಹೊಸ ಹೊಸ ಸಂದೇಹಗಳು-ಹೊಸ ಪ್ರಭಾವಗಳಿಂದಾದ ಹೊಸ ಆಲೋಚನಾವಿಧಾನಗಳು. ಅನುದಿನದ ಔದ್ಯೋಗಿಕ ಕ್ರಾಂತಿಯಲ್ಲಿ ಬೋಧೆಯಲ್ಲಿನ ಸಂದೇಹಗಳಲ್ಲದೆ ಬೋಧನಾ ವಿಧಾನದ ಬಗ್ಗೆಯೇ ಸಂದೇಹಗಳುಂಟಾಗಿ ಸಂಧಿಗ್ಧತೆಗಳೆಯುತ್ತವೆ.

ನಾವು ಎತ್ತ ಹೋಗಬೇಕಿದೆ ಎಂಬುದನ್ನು ಎಂದರೆ ನಮ್ಮ ಗುರಿಯನ್ನು ಮೊದಲು ಖಚಿತ ಪಡಿಸಿಕೊಳ್ಳಬೇಕಾದ ಆಗತ್ಯವಿದೆ. ಅಂದಾಜು ಇಲ್ಲದ ಅಲೆತದಲ್ಲಿ ದೊಡ್ಡಿಯ ಗುರುತ ಮರೆತ ಪಶುಗಳಾಗುತ್ತಿದ್ದೇವೆ ಅಥವಾ ಬಹುದುಃಖಕರವಾದ ಇಹ ಸಂಸಾರದಲ್ಲಿನ ಸಾರವೇ ಇಷ್ಟು ಮಾತ್ರವೇನೋ? ಅದೇನೇ ಇರಲಿ; ಈ ಅಗೋಚರ ಗುರಿಯ ಗುರುತುಗಳನ್ನು ತಿಳಿಯಲೂ ಕೂಡ ಗುರುವಿನ ಗಟ್ಟಿ ಮಾರ್ಗದರ್ಶನ ಬೇಕಾಗುತ್ತದೆ ಎಂಬುದನ್ನು ಅವಧಾರಿಸಿ ಹೇಳಬೇಕಿಲ್ಲ. ಅದಕ್ಕಾಗಿ ಪ್ರಾರ್ಥಿಸ ಬೇಕಷ್ಟೆ.

ಕರುಣಾಳು ಬಾ ಬೆಳಕೆ
ಮುಸುಕಿದೀ ಮಬ್ಬಿನಲಿ
ಕೈಹಿಡಿದು ನಡೆಸೆನ್ನನು

— ಇದು ಅನುದಿನದ ಪ್ರಾರ್ಥನೆ ಆಗಬೇಕು.

# ಶ್ರೀ ವೆಂಕಟೇಶ್ವರ ಭಕ್ತಿಸಾರ

ರಮ್ಯ ಚರಿತನೆ ಎನ್ನ ಜನ್ಮದೊ
ಳೊಮ್ಮೆಯಾದರು ನೀಡು ನಿನ್ನಯ
ಸೌಮ್ಯ ದರ್ಶನ, ನಮ್ರ ಸೇವಕನಲ್ಲವೇ ನಾನು ||
ಧೌಮ್ಯ ಮುನಿ ವಂದಿತನೆ, ಇಂದ್ರ
ದ್ಯುಮ್ನ ಭೂಪತಿಗೊಲಿದ ಹೇ ಪ್ರ
ದ್ಯುಮ್ನ ಮನ್ಮಥನಯ್ಯ ವೇಂಕಟ ರಕ್ಷಿಸನವರತ || ೧ ||

ಅಜನಪಿತ ದ್ವಿಜರಾಜವಾಹನ
ವಿಜಯಸಾರಥಿ ಜಾನಕೀಪತಿ
ಸುಜನ ರಕ್ಷಕ, ಕುಜನ ಶಿಕ್ಷಕ, ಜಾಹ್ನವಿಯಜನಕ ||
ಅಜಭವೇಂದ್ರ ಸಮಸ್ತ ದಿವಿಜರು
ಭಜಿಸಿ ಪೂಜಿಸುವಂಥ ಪದ ಪಂ
ಕಜಕೆ ಭಕ್ತಿಲಿ ಮಣಿವೆ ವೇಂಕಟ ರಕ್ಷಿಸನವರತ || ೨ ||

ನೋಡಲಿಲ್ಲವೊ ನಿನ್ನ, ಮಹಿಮೆಯ
ಪಾಡಲಿಲ್ಲವೊ, ಗಾಢಭಕ್ತಿಯ
ಕೋಡಿಯಲಿ ಈಜಾಡಲಿಲ್ಲವೊ, ಮಾಡುತೊಂದನೆಯ ||
ಬೇಡಲಿಲ್ಲವೊ ವರಗಳನು, ಕೊಂ
ಡಾಡಲಿಲ್ಲವೊ, ನಿನ್ನ ಭಕ್ತರ
ಜೋಡನಲ್ಲಾಡದನ ವೇಂಕಟ ರಕ್ಷಿಸನವರತ || ೩ ||

ಖುಲ್ಲ ದೈತ್ಯ ಹಿರಣ್ಯ ಕಶ್ಯಪ
ನೆಲ್ಲಿ ಎಲ್ಲಿಹ ನಿನ್ನ ಲಕ್ಷ್ಮೀಶ
ನಲ್ಲಿ ನಿಲ್ಲಯೆ ತೋರಿಸೆನ್ನುತ ಹಲ್ಲುಗಳ ಕಡಿಯೆ ||
ಭಲ್ಲವಿಸಿ ಪ್ರಹ್ಲಾದ ಬಾಲನ
ಸೊಲ್ಲನಾಲಿಸುತಾ ಸಭಾಂಗಣ
ಕಲ್ಲು ಕಂಬದಿ ಒಂದ ವೇಂಕಟ ರಕ್ಷಿಸನವರತ || ೪ ||

ಆವಜನ್ಮದ ಸುಕೃತ ಫಲವೋ
ಈ ವಸುಂಧರೆಯಲ್ಲಿ ಜನಿಸಿದೆ
ದೇವ ದೇವನೆ ನಿನ್ನ ಕಾರುಣ್ಯಾವಲೋಕನದಿ ||
ಸಾವು-ಹುಟ್ಟು ಸಮಸ್ಯೆ ತಪ್ಪಿಸಿ
ಜೀವನಕೆ ನೆಮ್ಮದಿಯ ಕೊಡು ರಾ
ಜೀವ ಪೀಠನಪಿತನೆ ವೇಂಕಟ ರಕ್ಷಿಸನವರತ || ೫ ||

ಶ್ರೀಪತಿಯೆ ಪ್ರತಿನಿತ್ಯದಲಿ ತ್ರಯ
ತಾಪಗಳ ವ್ಯಾಪಾರದಿಂದನು
ತಾಪಪಡುತಿಹೆ ನೀ ಪರಾಮರಿಸುತ್ತ ಕೈ ಪಿಡಿಯೊ ||
ಪಾಪಕೂಪದಿ ಮುಳುಗುತಿಹ ನರ
ಪಾಪಿಯೆನ್ನಾಲಾಪ ಕೇಳದೆ
ಆ ಪರೀಕ್ಷಿತಗೊಲಿದ ವೇಂಕಟ ರಕ್ಷಿಸನವರತ || ೬ ||

ಸಪ್ತಗಿರಿ ತಿಮ್ಮಪ್ಪ ತಪ್ಪದೆ
ಕಪ್ಪ-ಕಾಣಿಕೆಗಳನು ನೀಡುತ
ಲಿಪ್ಪೆನಾ ಪ್ರತಿ ವರ್ಷ ಬ್ರಹ್ಮೋತ್ಸವದ ವೇಳೆಯಲಿ ||
ಮುಪ್ಪು ಬಂದೆನಗಡರ ದಿರ್ಪುದೆ
ಅಪ್ಪ ನಿನ್ನಯ ಪರಮ ದರ್ಶನ
ಬೆಪ್ಪ ಭಕ್ತನಿಗಿತ್ತು ವೇಂಕಟ ರಕ್ಷಿಸನವರತ || ೭ ||

ಕುಕ್ಷಿಯೊಳಗೀರೇಳು ಜಗ ಸಂ
ರಕ್ಷಿಸುವ ಪಕ್ಷೀಂದ್ರಗಮನ ಪ
ರೀಕ್ಷಿತಪ್ರಿಯ ಲಕ್ಷ್ಮಿಪತಿ ಕಮಲಾಕ್ಷ ಕರ ಮುಗಿವೆ ||
ಲಕ್ಷ್ಯ ಪೂರ್ವಕ ಎನಗೆ ನಿನ್ನ ಪ
ರೋಕ್ಷ ಜ್ಞಾನವನಿತ್ತು ಕರುಣಾ ಕ
ಟಾಕ್ಷ ವೀಕ್ಷಣದಿಂದ ವೇಂಕಟ ರಕ್ಷಿಸನವರತ || ೮ ||

ಹರಿಯೆ ನಿನ್ಹೊರತೆನ್ನ ಕರುಣದಿ
ಪೊರೆವ ಪ್ರಭುವಿನ್ಯಾರು ? ಭೃತ್ಯರ
ಕರೆಗೆ ಕೋಮಲ ಹೃದಯ ಕರಗದೆ ಗರುಡವಾಹನನೆ ||



ಶರಣ ಜನಸುರಧೇನು ಕರುಣಾ
ಶರಧಿ ನೀನಹುದೆಂದು ದಾಸರು
ಪರವಶದಿ ಪೊಗಳಿಹರು ವೇಂಕಟ ರಕ್ಷಿಸನವರತ ॥ ೯ ॥

ಏನು ಧನ್ಯರೊ ನಿನ್ನ ಭಕ್ತರು
ಸಾನು ಕಂಪದಿ ಪೊರೆವ ನಿನ್ನ ಸ
ಮಾನ ದೇವರ ಕಾಣೆ, ವೇದಪುರಾಣ ಶಾಸ್ತ್ರದಲಿ ॥
ದೀನಬಂಧುವೆ, ಶಿಷ್ಟಜನರಾ
ಧೀನ ನೀನಹುದಹುದು ಇದಕನು
ಮಾನ ವೆಳ್ಳಸಿತಿಲ್ಲ ವೇಂಕಟ ರಕ್ಷಿಸನವರತ ॥ ೧೦ ॥

ಜನಕನಾಜ್ಞೆಗೆ ಮಣಿದು ನೀ ಕಾ
ನನವ ಸೇರಿದೆ ಜಾನಕಿಯ ಜೊತೆ,
ಜನಕನಾಣತಿಯಿಂದ ಜನನಿಯ ಶಿರವ ಛೇದಿಸಿದೆ ॥
ಜನನ ಮರಣವಿದೂರ ಜಾಹ್ನವಿ
ಜನಕ ಜನನಿಗೆ ತ್ರಿಜಗ ತೋರಿಸಿ
ದನಘ ಎನ್ನಘ ಕಳೆದು ವೇಂಕಟ ರಕ್ಷಿಸನವರತ ॥ ೧೧ ॥

ಘೋರ ನಾನಿಂದಂಧಕಾರದಿ
ದಾರಿಗಾಣೆನು ಮೋಕ್ಷದೂರಿನ
ದ್ವಾರ ಸೇರುವ ದಾರಿ ತೋರುವರಾರು ನಿನ್ನುಳಿದು ॥
ಸಾರಿಭಜಿಸುವ ಭಕ್ತ ಜನರು
ದ್ಧಾರ ಕಾರ್ಯದ ಭಾರ ಹೊರಲವ
ತಾರವೆತ್ತುವ ಧೀರ ವೇಂಕಟ ರಕ್ಷಿಸನವರತ ॥ ೧೨ ॥

ಭಕ್ತರಪರಾಧಗಳ ಕ್ಷಮಿಸುವ
ಶಕ್ತರಿನ್ನಾರುಂಟು ಜಗದಲಿ
ಭಕ್ತಿಯಿಂದಲಿ ಭಜಿಪ ವ್ಯಕ್ತಿಗೆ ಸೂಕ್ತ ಸಮಯದಲಿ ॥
ಮುಕ್ತ ದರ್ಶನವಿತ್ತು ಕೊನೆಯಲಿ
ಮುಕ್ತಿನೀಡುವ ಸರ್ವಶಕ್ತ ವಿ
ರಕ್ತರಪ್ರಿಯ ನಮಿಪೆ ವೇಂಕಟ ರಕ್ಷಿಸನವರತ ॥ ೧೩ ॥

ಇಳೆಯ ದಾನವ ಬೇಡಿ ಬಲಿಯನು
ತುಳಿದೆ ಭೂತಳ ಕವನ ಭಕ್ತಿಗೆ
ಒಲಿದು ತಲೆ ಬಾಗಿಲವ ನೀನನುಗಾಲದಲಿ ಕಾಯ್ವೆ ॥
ಶಿಲೆಯು ಸ್ತ್ರೀಯಳಗೈದೆ ನೀನೆಂ
ಜಲದ ಫಲಗಳ ಸವಿದೆ ಮಾತೆಯ
ತಲೆ ಕುಠಾರದಿ ಕಡಿದ ವೇಂಕಟ ರಕ್ಷಿಸನವರತ ॥ ೧೪ ॥

ಕರಿಯು ಕಕ್ಕನೆ? ಬಲಿಯು ತಮ್ಮನೆ?
ಕಿರಿಯ ಧ್ರುವ ಪ್ರಲ್ಹಾದರಾಪ್ತರೆ?
ವರವಿಭೀಷಣ, ವಿದುರ ಮಾರುತಿ ಪಂಚಪಾಂಡವರು ॥
ಸರಿಕರೇ? ಆ ಶಬರಿ ತಂಗಿಯೆ
ಪರಮ ಕರುಣೆಯಲಿವರಿಗೊಲಿದಿಹ
ಪರಿಯ ಒಲ್ಲೆನು ಪ್ರಭುವೆ ವೇಂಕಟ ರಕ್ಷಿಸನವರತ ॥ ೧೫ ॥

ಬಲಿಯು ಮೆಟ್ಟಿದ ಪಾದಕಹಲೆಯ
ತುಳಿದು ಉದ್ಧರಿಸಿರ್ಪ ಪಾದ
ಕ್ರಳೆಯು ಮೂರಡಿ ಅಳೆದ ಚರಣಕೆ ಘಳಿಗೆ ಸಹ ಬಿಡದೆ ॥
ನಳಿನ ಮುಖಿ ಮಹಲಕ್ಷ್ಮಿ ಸೇವಿಸ
ಹೊಳೆಯುವಂಘ್ರಿಗೆ, ನಾಗರಾಜನ
ತುಳಿದ ಅಡಿಗೊಂದಿಸುವೆ ವೇಂಕಟ ರಕ್ಷಿಸನವರತ ॥ ೧೬ ॥

ಪಾಲವಾರಿಧಿ ಶಯನ, ಆ ಶಿಶು
ಪಾಲ ಮಸ್ತಕ ಶೂಲ, ನತಜನ
ಪಾಲ ಸದ್ಗುಣಶೀಲ, ಕಾಲನಕಾಲ ಶ್ರೀಲೋಲ ॥
ನೀಲ ಮೇಘಶ್ಯಾಮ ನಿನ್ನಯ
ಕಾಲಿಗೆರಗುವೆ ಕಾಲಿಭಂಜನ
ಫಾಲನೇತ್ರನಿಗೊಲಿದ ವೇಂಕಟ ರಕ್ಷಿಸನವರತ ॥ ೧೭ ॥

ಅಂಗದಪ್ರಿಯ ರಂಗ ಶ್ರೀ ನರ
ಸಿಂಗ ಗಂಗಾ ಜನಕ, ಗರುಡ ತು
ರಂಗ ಮಂಗಳ ಮಹಿಮ ಸಂಗೀತಪ್ರಿಯ ಗಿರಿರಾಯ ॥
ಮಂಗಳಾಂಗ ಭುಜಂಗ ಶಯನ ರ
ಥಾಂಗ ಪಾಣಿಯೆ ನಮಿಪೆ ನೀ ಭವ
ಭಂಗ ಹಿಂಗಿಸುತೆನ್ನ ವೇಂಕಟ ರಕ್ಷಿಸನವರತ ॥ ೧೮ ॥

ಜಗದ ಜೀವಿಗಳೆಲ್ಲ ಸಲಹುವ
ನಿಗಮಗೋಚರ ನಿತ್ಯ ತೃಪ್ತನೆ
ಗಗನಕೇಶಾದ್ಯಮರರೆಲ್ಲರು ಪೊಗಳಿ ಹಿಗ್ಗುವರು ॥
ಖಗವರಧ್ವಜ ಚಾರುಪದಯು
ಗ್ಮಗಳ ಹಗಲಿರುಳೆನ್ನದಲೆ ಬಗೆ
ಬಗೆಯ ಭಕ್ತಿಲಿ ಭಜಿಪೆ ವೇಂಕಟ ರಕ್ಷಿಸನವರತ ॥ ೧೯ ॥

ಅಲ್ಲಿ ನೀನಿಹೆ ಇಲ್ಲಿ ನೀನಿಹೆ
ಎಲ್ಲ ವಸ್ತುಗಳಲ್ಲಿ ನೀನಿಹೆ
ಅಲ್ಲಿ ಇಲ್ಲೆಲ್ಲಲ್ಲಿ ಇಲ್ಲೆಂಬ ಸೊಲ್ಲಿಲ್ಲ ॥
ಎಲ್ಲ ದೇವರುಗಳಲಿ ನೀನತಿ
ಬಲ್ಲಿದನು ಬಹುಬಾಹುವಂತನು
ಫುಲ್ಲಲೋಚನ ನಮಿಪೆ ವೇಂಕಟ ರಕ್ಷಿಸನವರತ ॥ ೨೦ ॥

—ಶ್ರೀ ಕೆ. ರಾಮಾಚಾರ್ಯ

# ಎಂಥ ಪಾವನ ಪಾದವೋ

ಸಂಚಿಂತಯೇದ್ ಭಗವತಃ
ಚರಣಾರವಿಂದಮ್
ವಜ್ರಾಂಕುಶ ಧ್ವಜ
ಸರೋರುಹ ಲಾಂಛನಾಢ್ಯಮ್
ಉತ್ತುಂಗ ರಕ್ತ
ವಿಲಸನ್ನಖ ಚಕ್ರವಾಲ
ಜ್ಯೋತ್ಸ್ನಾಭಿರಾಹತ ಮಹದ್
ಹೃದಯಾಂಧಕಾರಮ್

"ಭಗವಂತನ ಅಂಗಾಲುಗಳು ಪರಿಪುಷ್ಟವಾಗಿವೆ. ಹಾಗೂ ವಜ್ರಾಂಕುಶ ಧ್ವಜ ತಾವರೆಯ ಚಿಹ್ನೆಗಳಿಂದೊಡಗೂಡಿವೆ. ಪಾದದ ಮೇಲ್ಭಾಗದಲ್ಲಿರುವ ಆರಕ್ತ ಉಗುರುಗಳು ತಮ್ಮ ವಿಶಿಷ್ಟವಾದ ಪ್ರಕಾಶ ಕಿರಣಗಳಿಂದ ಮಾನವರ ಹೃದಯದಲ್ಲಿ ತುಂಬಿರುವ ಅಜ್ಞಾನವೆಂಬ ಅಂಧಕಾರವನ್ನು ದೂರಮಾಡುತ್ತವೆ ಇಂತಹ ಪಾದ ಕಮಲಗಳನ್ನು ಮನದಲ್ಲಿ ಸದಾಕಾಲ ಚಿಂತಿಸಬೇಕು" ಇದು ಸಾತ್ತ್ವಿಕ ಲೋಕಕ್ಕೆ ಶ್ರೀಮದ್ಭಾಗವತದ ಸಂದೇಶ ಭಗವಂತನು ಕಪಿಲಾವತಾರವನ್ನು ಸ್ವೀಕರಿಸಿದ್ದಾಗ, ಮೇಲಿನಂತೆ ತನ್ನ ಪಾದಕಮಲಗಳನ್ನು ಧ್ಯಾನಿಸಬೇಕೆಂದು ದೇವಹೂತಿಗೆ ಉಪದೇಶಿಸಿದ್ದಾನೆ.

ಅನಂತ ಮಹಿಮೆಗಳನ್ನುಳ್ಳ ಭಗವಂತನ ಪಾದಗಳ ಮಹಿಮೆಗಳನ್ನು ಹರಿದಾಸರುಗಳು ತಮ್ಮ ಕೃತಿಗಳಲ್ಲಿ ವಿಶೇಷವಾಗಿ ಕೊಂಡಾಡಿದ್ದಾರೆ

ಅದರಂತೆ ವಾದಿರಾಜರು ಪರಮಾತ್ಮನನ್ನು ಬಗೆ ಬಗೆಯಾಗಿ ವರ್ಣಿಸಿರುವುದುಂಟು. ಆತನ ಪಾದಗಳ ಮಾಹಾತ್ಮ್ಯವನ್ನು ಎಷ್ಟು ಹೊಗಳಿದರೂ ಅವರಿಗೆ ತೃಪ್ತಿಯಿಲ್ಲ. ಭಗವಂತನ ಪಾದಕಮಲಗಳನ್ನು ಕೊಂಡಾಡುವ ನೆಪದಲ್ಲಿ, ಪಾದಗಳ ಮಹತ್ತ್ವಗಳನ್ನು ಬಿಡಿ ಬಿಡಿಯಾಗಿ ವರ್ಣಿಸಿದ್ದಾರೆ. "ಎಂಥಾ ಪಾವನ ಪಾದವೋ ಕೃಷ್ಣಯ್ಯಾ ಇನ್ನೆಂಥ ಚೆಲುವ ಪಾದವೋ" ಎಂಬ ಕೀರ್ತನೆಯಲ್ಲಿ, ಶ್ರೀಕೃಷ್ಣನ ಪಾದ ಮಹಿಮೆ, ತ್ರಿವಿಕ್ರಮನ ಪಾದದ ಅತಿಮಹತಿ, ಶ್ರೀರಾಮನ ಪಾದದ ಸ್ಪರ್ಶದ ಪುನೀತತ್ವ, ಮೊದಲಾದವುಗಳನ್ನು ವರ್ಣಿಸಿದ್ದಾರೆ. ಪರಮಾತ್ಮನ ಪಾದಸೇವಕರಾದ ವಾದಿರಾಜರ ಭಕ್ತಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವಲ್ಲಿ ಈ ರಚನೆಗಳು ಗಮನಾರ್ಹವಾದುವು.

ಎಂಥಾ ಪಾವನಪಾದ ಇಂತು
ಜಗದಿ ಕೇಳು
ಪಂಥದೊಳಿದ್ದ ಕುರುಪತಿಯು
ಉರುಳಿಸಿದ

ಮಹಾಭಾರತದ ಪ್ರಸಂಗ. ಕೌರವ–ಪಾಂಡವರಲ್ಲಿ ಸಂಧಾನವನ್ನು ತರಲು, ಶ್ರೀ ಕೃಷ್ಣ, ಪಾಂಡವರಿಗೆ ಅರ್ಧರಾಜ್ಯವನ್ನು ಕೇಳಲು ದುರ್ಯೋಧನನ ಬಳಿ ದೂತನಾಗಿ ಹೋದಾಗ, ಶ್ರೀಕೃಷ್ಣನು ಬಂದ ಸುದ್ದಿಯನ್ನು ತಿಳಿದು ಭೀಷ್ಮಾದಿಗಳೆಲ್ಲರೂ ತಮ್ಮ ಆಸನಗಳಿಂದೆದ್ದು ಶ್ರೀಕೃಷ್ಣನಿಗೆ ಗೌರವ ಸೂಚಿಸುತ್ತಾರೆ. ಆದರೆ ದುರ್ಯೋಧನ ಮಾತ್ರ ಜಿದ್ದಿನ ಭಾವನೆಯಿಂದ, ಸಿಂಹಾಸನದಿಂದ ಕದಲಲಿಲ್ಲ. ಧರೆಯೊಡೆಯನ ಗರ್ವವನ್ನು ಕಂಡ ಜಗದೊಡೆಯನಾದ ಶ್ರೀಕೃಷ್ಣ, ತನ್ನ ಉಂಗುಷ್ಠದಿಂದ ನೆಲವನ್ನೊಮ್ಮೆ ಒತ್ತಲು ದುರ್ಯೋಧನ ಸಿಂಹಾಸನದಿಂದ ಉರುಳಿ ಕೃಷ್ಣನ ಕಾಲಬಳಿ ಬಂದು ಬೀಳುತ್ತಾನೆ.

ಹಲವು ಕಾಲಗಳಿಂದ ಮಾರ್ಗದಿ
ಶಿಲೆ ಶಾಪ ಪಡೆದಿರಲು
ಒಲಿದು ರಜದಿ ಪಾವನಗೈದು
ಕರುಣದಿಂದ–
ಬಲೆಯ ಮಾಡಿ ಸಲಹಿದ ಶ್ರೀ ಹರಿಯ

–ರಾಮಾವತಾರದ ಅಹಲ್ಯಾ ಶಾಪ ವಿಮೋಚನೆಯ ಪ್ರಸಂಗ. ಗೌತಮರ ಶಾಪದಿಂದ ಶಿಲೆಯಾಗಿದ್ದ ಅಹಲ್ಯೆಯನ್ನು ಉದ್ಧರಿಸಲು ಶ್ರೀರಾಮಚಂದ್ರನಿಗೆ ವಿಶ್ವಾಮಿತ್ರರಿಂದ ಪ್ರಾರ್ಥನೆ. ಶ್ರೀರಾಮಚಂದ್ರ ಗೌತಮರ ಆಶ್ರಮವನ್ನು ಪ್ರವೇಶಮಾಡಿದ. ತನ್ನ ಕೃಪಾಕಟಾಕ್ಷದಿಂದ, ಕಲ್ಲಾಗಿದ್ದ ಅಹಲ್ಯೆಯನ್ನು ನೋಡಿದ. ಅವನ ಪಾದ ಸ್ಪರ್ಶವಾಯಿತು. ಕಲ್ಲಾಗಿದ್ದ ಅಹಲ್ಯೆಯು ಸುಂದರ ರೂಪ ತಾಳಿದಳು. ಶ್ರೀರಾಮ ಗೌತಮರನ್ನು ಮತ್ತು ಅಹಲ್ಯೆಯನ್ನು ಒಂದುಗೂಡಿಸಿದ. ಮುನಿದಂಪತಿಗಳು ಶ್ರೀರಾಮಚಂದ್ರನನ್ನು ವಿಶೇಷವಾಗಿ ಪೂಜಿಸೈದರು.

ಶ್ರೀ ಹನುಮಂತಾಚಾರ್ಯ

ಬಲಿಯ ದಾನವ ಬೇಡಿ
ತ್ರೈಲೋಕವ–
ನಳೆದು ಏಕಾಂಘ್ರಿಯಲಿ
ಬೆಳೆಯ ಭೇದಿಸಲಾಗ
ನಳಿನಜಾಂಡವ ಸೋಕಿ
ಚೆಲುವ ಗಂಗೆಯಪೆತ್ತ
ಜಲಜಾಸನಾರ್ಚಿತ

– ಹಿಂದೊಮ್ಮೆ ಬಲಿಚಕ್ರವರ್ತಿಯು ತನ್ನ ಪತ್ನಿ ವಿಂಧ್ಯಾವಳಿಯಿಂದೊಡಗೂಡಿ, ಕೊಟ್ಟದಾನವನ್ನು ಸ್ವೀಕರಿಸಲು ವಾಮನ ರೂಪೀ ಪರಮಾತ್ಮನ ಪಾದಾಂಗುಷ್ಠದಿಂದ ಭಿನ್ನವಾದ ಬ್ರಹ್ಮಾಂಡ ಖರ್ಪರದ ಘನೋದಕವು ಪಾದದುಂಗುಟದಿಂದ ಹರಿದು ಬಂದಿತು. ಸತ್ಯಲೋಕಕ್ಕೆ ಬಂದ ಈ ಜಲಧಾರೆಯನ್ನು ಸತ್ಯಲೋಕಾಧಿಪತಿಯಾದ ಬ್ರಹ್ಮದೇವರು ತಮ್ಮ ಕಮಂಡಲದಲ್ಲಿ ತುಂಬಿಕೊಂಡು ಶ್ರೀ ವಿಷ್ಣುವಿನ ಪಾದಾರವಿಂದಗಳಿಗೆ ಅಭಿಷೇಕಗೈದರು.

ಸತ್ಯಲೋಕದಲ್ಲಿ ಬ್ರಹ್ಮದೇವರು ಕಮಂಡಲದಲ್ಲಿ ಹಿಡಿದು ಬಿಟ್ಟ ಜಲಧಾರೆಯು ಆ ಲೋಕದಲ್ಲಿ "ವಿರಜಾ" ಎಂಬ ಹೆಸರಿನಿಂದ ಜನರನ್ನು ಪಾವನ ಮಾಡುತ್ತಿರುವಳು. ಅಲ್ಲಿಂದ ಮುಂದುವರೆದ ಈ ಗಂಗೆಯು, ತಪೋಲೋಕ, ಮಹರ್ಲೋಕ, ಜನಲೋಕ ಮತ್ತು ಸ್ವರ್ಗಲೋಕಗಳನ್ನು ಪಾವನ

ಗೊಳಿಸಿ, ಧ್ರುವಲೋಕದಲ್ಲಿ ಇಳಿದಳು. ನಂತರದಲ್ಲಿ ಸಪ್ತರ್ಷಿ ಮಂಡಲ, ಚಂದ್ರ ಮಂಡಲಗಳನ್ನು ತಣಿಸಿ ಮೇರುಪರ್ವತದ ತುದಿಯಲ್ಲಿರುವ ಬ್ರಹ್ಮಸದನದ ಸುತ್ತಲೂ ಹರಿಯುತ್ತಿರುವಳು. ಅಲ್ಲಿಂದ ನಾಲ್ಕು ದಿಕ್ಕಿಗೆ ನಾಲ್ಕು ಶಾಖೆಗಳಾಗಿ ಧುಮುಕಿದ ಗಂಗೆಯು 'ನೇತ್ರಾ, ಚಕ್ಷು. ಭದ್ರಾ ಮತ್ತು ಅಲಕನಂದಾ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವಳು. ದಕ್ಷಿಣದ ಶಾಖೆಯಾದ "ಅಲಕನಂದಾ" ಕರ್ಮಭೂಮಿಯಾದ ಭಾರತದಲ್ಲಿ ಹರಿಯುಬಂದು ಭಜಕರ ಪಾಪಗಳನ್ನು ತೊಳೆದು ಪುನೀತರನ್ನಾಗಿ ಮಾಡುತ್ತಿರುವಳು.

ಚೆಂಡು ತರುವ ನೆವದಿ ಕಾಳಿಂಗನು–
ದ್ದಂಡ ಮಡುವ ಧುಮುಕಿ
ಚಂಡಕಾಳಿಂಗನ ಮಂಡೆಯೊಳು ಪಾದ
ಪುಂಡರೀಕವನಿಟ್ಟು ತಾಂಡವನಾಡಿದ

–ಕೃಷ್ಣಾವತಾರದ ರೋಚಕ ಪ್ರಸಂಗ. ಯಮುನಾನದಿಯ ಮಡುವಿನಲ್ಲಿ ಸೇರಿಕೊಂಡಿದ್ದ ಕಾಳಿಯನೆಂಬ ವಿಷಸರ್ಪದ ಜ್ವಾಲೆಯಿಂದಾಗಿ, ಆ ಮಡುವಿಗೆ ಧುಮುಕಿದ ಬಾಲಕೃಷ್ಣ ಕಾಳಿಯ ಸರ್ಪದ ಮೇಲೆ ಕುಣಿದಾಡಿದ. ಪ್ರಳಯ ಸಮುದ್ರದಲ್ಲಿ ಶೇಷನ ಮೇಲೆ ಸುಖಶಯನ ಮಾಡುವ ಶ್ರೀಕೃಷ್ಣನಿಗೆ ಶೇಷ ಹಾಗೂ ಕಾಳಿಯ ಇವರಿಬ್ಬರಿಂದ ಇವನ ಕಾಂತಿಗೆ ಭಂಗವಿಲ್ಲ. ಕಾಳಿಯನ ಪತ್ನಿಯರ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಕೃಷ್ಣ, ಈ ವಿಷಸರ್ಪಕ್ಕೆ ಪ್ರಾಣಭಿಕ್ಷೆಯನ್ನು ದಯಪಾಲಿಸಿ ಈ ಸರ್ಪವನ್ನು ರಮಣಕ ದ್ವೀಪಕ್ಕೆ ಓಡಿಸಿ ಯಮುನೆಯನ್ನು ಶುದ್ಧಗೊಳಿಸಿದನು.

ಒಲಿದು ಗಯಾಸುರನ ಶಿರದೊಳಿಟ್ಟು
ಹಲವು ಭಕ್ತರ ಪೊರೆವೆ
ನೆಲಸಿ ಉಡುಪಿಯಲಿ ಎನ್ನ
ಹೃದಯ ಕಮಲದಲಿ
ತೊಲಗದೆ ಇರುತಿಪ್ಪ ಸುಲಭ
ಹಯವದನ

–ಗಯಾಸುರ ಒಬ್ಬ ರಾಕ್ಷಸ. ಲೋಕಕಂಟಕನಾಗಿದ್ದ ಗಯಾಸುರನ ಶರೀರದ ಮೇಲೆ ಬ್ರಹ್ಮ ಯಜ್ಞವೇದಿಕೆಯನ್ನು ನಿರ್ಮಿಸಿ ಯಜ್ಞ ಮಾಡುತ್ತಿದ್ದಾಗ, ಗಯಾಸುರನು ಅಲುಗಾಡದಂತೆ ವಿಷ್ಣು ಅವನ ಮೇಲೆ ನಿಂತ. ಆಗ ಗಯಾಸುರನು ತಾನು ಸತ್ತ ಬಳಿಕ ಈ ಪ್ರದೇಶ ಪುಣ್ಯಕ್ಷೇತ್ರವಾಗಿ "ಗಯಾ' ಎಂಬ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯಬೇಕೆಂದು ಭಗವಂತನಲ್ಲಿ ಪ್ರಾರ್ಥಿಸಿದ. ಅದರಂತೆ ಗಯಾಸುರನು ತಲೆಯಿಟ್ಟಿದ್ದ ಪ್ರದೇಶ "ಗಯಾಶೀರ್ಷ"ವೆಂದು ಪ್ರಸಿದ್ಧಿಯನ್ನು ಪಡೆದು, ಈಗಲೂ ಅಲ್ಲಿ ಭಕ್ತರು ತಮ್ಮ ಪಿತೃ ಪ್ರೀತ್ಯರ್ಥವಾಗಿ ಪಿಂಡಪ್ರದಾನಗಳನ್ನು ಮಾಡಿ ಕೃತಕೃತ್ಯರಾಗುತ್ತಿರುವರು.

ಇಂತಹ ಭಗವಂತನ ಪಾದಕಮಲಗಳು ಭಜಕರ ಪಾಪಗಳನ್ನು ಕಳೆದು ಸದ್ಗತಿಗೆ ಕಾರಣವಾಗುವುವು.

*

# ಹಯಗ್ರೀವಾವತಾರ

ಆತ್ಮಾನಂ ರಥಿನಂ ವಿದ್ಧಿ
ಶರೀರಂ ರಥಮೇವತು
ಬುದ್ಧಿಂತು ಸಾರಥಿಂ ವಿದ್ಧಿ
ಮನಃ ಪ್ರಗ್ರಹಮೇವಚ
ಇಂದ್ರಿಯಾಣಿ ಹಯಾನಾಹುಃ
ವಿಷಯಾಂಸ್ತೇಷು ಗೋಚರಾನ್
ಆತ್ಮೇಂದ್ರಿಯಮನೋ ಯುಕ್ತಂ-
ಭೋಕ್ತೇತ್ಯಾಹುರ್ಮನೀಷಿಣಃ

—ಕಠೋಪನಿಷತ್

ಮನುಷ್ಯನು ಶರೀರೇಂದ್ರಿಯಗಳಿಂದ ಕೂಡಿದ ಒಬ್ಬ ಜೀವಿ ಈ ಶರೀರವು ಒಂದು ರಥ, ಆತ್ಮವು ರಥಿ, ಇಂದ್ರಿಯಗಳೆ ಅಶ್ವಗಳು, ಬುದ್ಧಿಯು ಸಾರಥಿ, ಮನಸ್ಸೇ ಕಡಿವಾಣ ಮತ್ತು ಪ್ರಾಪಂಚಿಕ ವಿಷಯಗಳೇ ಹಾದಿಗಳು. ಬುದ್ಧಿಯು ಸರಿಯಾಗಿದ್ದರೆ ಎಲ್ಲವೂ ಹತೋಟಿಯಲ್ಲಿರುವುದು. ಇದು ಕೆಟ್ಟರೆ ಇಂದ್ರಿಯಗಳ ಹತೋಟಿ ತಪ್ಪಿ ಜೀವನವು ತುಂಟ ಕುದುರೆಯಂತೆ ಗುರಿಮುಟ್ಟಲಾಗದೆ ಕಷ್ಟವಾಗುವುದು. ಆದ್ದರಿಂದ ಯಾವನು ಇಂದ್ರಿಯಗಳೆಂಬ ಕುದುರೆಗಳನ್ನು ಬುದ್ಧಿ, ಎಂಬ ಕಡಿವಾಣದಿಂದ ಸರಿಯಾಗಿ ನಡೆಸುವನೋ ಅವನು ಸುರಕ್ಷಿತವಾಗಿ ತನ್ನ ಜೀವನದ ಗುರಿಯನ್ನು ಮುಟ್ಟುವನು. ಜ್ಞಾನದಿಂದಲೇ ಇಂದ್ರಿಯಗಳನ್ನು ಹತೋಟಿಯಲ್ಲಿಡಲು ಸಾಧ್ಯವಾಗುವುದು. ಇಂತಹ ಜ್ಞಾನವು ಭಗವದನುಗ್ರಹದಿಂದ ಲಭ್ಯವಾಗುವುದು. ರಜಸ್ತಮೋಗುಣಗಳನ್ನು ಅಡಗಿಸಿಕೊಂಡ ಸತ್ಪುರುಷನು ಸಾತ್ತ್ವಿಕನಾಗಿ ವೇದಶಾಸ್ತ್ರಾಧ್ಯಯನದಿಂದ ಪರತತ್ತ್ವ ಸ್ವರೂಪವನ್ನು ಅರಿತು ವೈರಾಗ್ಯವನ್ನು ಹೊಂದಿ ಕೊನೆಗೆ ಮೋಕ್ಷವನ್ನು ಪಡೆಯಲು ಯತ್ನಿಸುತ್ತಾನೆ. ಇಂತಹ ಯತ್ನಗಳಲ್ಲಿ ಅವನಿಗೆ ಗುರುವಿನ ಕೃಪೆ ಮತ್ತು ಅನುಗ್ರಹ ಅತ್ಯಗತ್ಯವಾಗಿದೆ ಭಗವಂತನು ಆದಿಗುರು, ಜ್ಞಾನಾನಂದಮಯನೂ, ವಿದ್ಯಾಧೀಶನೂ,ವಿದ್ಯಾವಾರಿಧಿಯೂ ಹಾಗೂ ವಾಗೀಶನೂ ಆದ ಶ್ರೀ ಹಯಗ್ರೀವನೇ ಆ ಆದಿಗುರು. ಎಲ್ಲಾ ಸದ್ವಿದ್ಯೆಗಳಿಗೂ ಜ್ಞಾನ, ಸದ್ಬುದ್ಧಿ, ಮನಸ್ಸು ಮತ್ತು ವಾಕ್‌ಗಳಿಗೂ ಅವನೇ ಆಧಾರ ಮತ್ತು ಅಧಿಪತಿ.

ಹಯಗ್ರೀವ ಎಂದರೆ ಕುದುರೆ ಕತ್ತುಳ್ಳವನು ಎಂದರ್ಥ. ತಿರ್ಯಕ್‌ಗಳಲ್ಲಿ ಅಶ್ವವು ಬಹಳ ಜ್ಞಾನ ಬುದ್ಧಿ ಮತ್ತು ಶಕ್ತಿಯುಳ್ಳದ್ದು. ಜ್ಞಾನೋಪದೇಶ ಮಾಡಲು ಯೋಗ್ಯವಾದುದು ಎಂದು ಭಗವಂತ ಈ ರೂಪವನ್ನು ಅವತಾರಕ್ಕೆ ಅಳವಡಿಸಿಕೊಂಡಿದ್ದಾನೆ, ಯಜ್ಞಯಾಗಾದಿಗಳಲ್ಲಿ 'ಪಂಚಕಲ್ಯಾಣಿ' ಎಂಬ ಬಿಳಿಅಶ್ವವು ಪರಮಶ್ರೇಷ್ಠವಾದುದು. ಹಯಗ್ರೀವ ಎಂಬ ಹೆಸರನ್ನು ಹೊಂದಿದ ರಾಕ್ಷಸ, ರಾಜ, ಋಷಿ, ಗಂಧರ್ವ ಮತ್ತು ದೇವತೆ—ಇವರುಗಳ ಕಥೆಗಳಿವೆ ಸೂರ್ಯ ಮತ್ತು ಅವನ ಪತ್ನಿ ಸಂಜ್ಞಾದೇವಿ ಅಶ್ವರೂಪಿಗಳು. ಇವರ ಮುಖಸಂಬಂಧದಿಂದ ಜನಿಸಿದವರು ಅಶ್ವಿನೀದೇವತೆಗಳು ಗಂಧರ್ವನಾದ ತುಂಬುರಿಗೆ ಹಯಶಿರಸ್ಸಿದೆ ಹಯಗ್ರೀವ ಎಂಬ ಭಕ್ಷ್ಯವಿದೆ.

ಈ ಅವತಾರದ ವೃತ್ತಾಂತ ಮಹಾಭಾರತದ 'ಶಾಂತಿಪರ್ವ' ದಲ್ಲಿ 96 ಶ್ಲೋಕಗಳನ್ನೊಳಗೊಂಡ 'ಮೋಕ್ಷಧರ್ಮ' ಎಂಬ ಅಧ್ಯಾಯದಲ್ಲಿ ಕಂಡು ಬರುವುದು. ಇದು 'ಹಯಶಿರೋಪಾಖ್ಯಾನ' ಎಂದು ಪ್ರಸಿದ್ಧಿಯಾಗಿದೆ.

ಮಹಾವಿಷ್ಣುವು ಪ್ರಳಯಾನಂತರ ವಿಶ್ವವನ್ನು ಸೃಷ್ಟಿಸಲು ಅನಿರುದ್ಧರೂಪಿಯಾಗಿ ಚತುರ್ಮುಖ ಬ್ರಹ್ಮನಿಗೆ ವೇದೋಪದೇಶಮಾಡಿ ಅಧಿಕಾರವನ್ನು ಕೊಡುವನು. ಆ ಸಂದರ್ಭದಲ್ಲಿ "ಬ್ರಹ್ಮದೇವ ನೀನು ಜಗದ್ಗುರು. ಸಮಸ್ತ ತಿರ್ಯಕ್‌–ಜಂಗಮಗಳಿಗೆ ಪಾಲಕನು ಮತ್ತು ಪ್ರಭುವಾಗಿರುವೆ. ಪ್ರಪಂಚದ ಈ ಕಾರ್ಯಭಾರವನ್ನು ನಿನಗೆ ವಹಿಸಿ ನಾನು ನಿಶ್ಚಿಂತನಾಗಿರುವೆನು. ಈ ಕಾರ್ಯ ಕುಂಠಿತವಾದಾಗ ನಾನು ಜ್ಞಾನೋಪದೇಶ ಮಾಡುವ ಸಲವಾಗಿ ನಿನ್ನ ಮುಂದೆ ಪ್ರತ್ಯಕ್ಷನಾಗಿ ಅನುಗ್ರಹಿಸುವೆನು" ಎಂದು ಬ್ರಹ್ಮನಿಗೆ ಹೇಳುವನು.

ಕಾಲಕ್ರಮೇಣ ಬ್ರಹ್ಮನಿಗೆ ಸ್ವಲ್ಪ ಅಹಂಕಾರ ಉಂಟಾಗಿ ಕೇಡಿಗೆ ಗುರಿಯಾಗುವನು. ತಿರುಮಂಗೈ ಆಳ್ವಾರರು 'ಪತೆಯಿಲ್ ನಾನ್ಮರೈ ಕೆಡುತ್ತು' (ಪೆ ತಿ. 5–7–2) ಎಂದು ಹೇಳಿ ಬ್ರಹ್ಮ ಅಹಂಕಾರ ವರ್ತನೆಯಿಂದ ವೇದಶಾಸ್ತ್ರಗಳು(ವೇದನೂಲ್) ಫಲಿಸದೆ ಕೇಡಿಗೆ ಗುರಿಯಾದ ಎಂದು ಅಭಿಪ್ರಾಯಪಟ್ಟಿದ್ದಾರೆ. ಬ್ರಹ್ಮನ ಈ ವರ್ತನೆಯನ್ನು ಗಮನಿಸಿದ ಭಗವಂತನು ಅವನನ್ನು ಅನುಗ್ರಹಿಸಲು ಎರಡು ತೊಟ್ಟು ನೀರಿನ ಹಾಗೆ ರಜಸ್ಸು ಮತ್ತು ತಮಸ್ಸು ಗುಣವುಳ್ಳ ಮಧು–ಕೈಟಭ ಎಂಬ ಇಬ್ಬರು ಅಸುರರನ್ನು ಸೃಷ್ಟಿಸುವನು. ಈ ದಾನವರು ಬ್ರಹ್ಮನ ಬಳಿ ಇರುವ ವೇದಗಳನ್ನು ಅಪಹರಿಸಿ ಪಾತಾಳಲೋಕಕ್ಕೆ ಹೋಗಿ ಅವಿತುಕೊಳ್ಳುವರು. ಬ್ರಹ್ಮನು ಜ್ಞಾನಶೂನ್ಯನಾಗಿ ಬಹಳ ಕ್ಲೇಶಪಟ್ಟು ಭಗವಂತನನ್ನು ಸ್ತುತಿಸುವನು. ಪ್ರಸನ್ನನಾದ ನಾರಾಯಣನು ಹಯಗ್ರೀವರೂಪವನ್ನು ತಾಳಿ ಅವತರಿಸಿ ಪಾತಾಳಲೋಕಕ್ಕೆ ಹೋಗಿ ಆ ಅಸುರರಿಗೆ ತಿಳಿಯದಂತೆ ವೇದಗಳನ್ನು ತೆಗೆದುಕೊಂಡು ಹೋಗಿ ಬ್ರಹ್ಮನಿಗೆ ದಯಪಾಲಿಸುವನು ಮತ್ತು ಜ್ಞಾನೋಪದೇಶವನ್ನು ಮಾಡುವನು ನಂತರ ಇತರದೇವತೆಗಳಿಗೂ ಜ್ಞಾನೋಪದೇಶವನ್ನು ಮಾಡುವನು. ವೇದಗಳನ್ನು ಕಾಣದೆ ಚಿಂತಾಕ್ರಾಂತರಾಗುವರು ಮಧುಕೈಟಭರು ವಿಷಯವನ್ನು ಊಹಿಸಿ ಹಯಗ್ರೀವನೊಂದಿಗೇ ಯುದ್ಧಮಾಡಿ ವಿಫಲರಾಗುವರು. ಜ್ಞಾನವೆಂಬ ಅಮೃತಪಾನ ಮಾಡಿದ ಬ್ರಹ್ಮನು ಪುನಃ ಜ್ಞಾನಸಂಪನ್ನನಾಗುವನು ಅಂದಿನಿಂದ ಹಯಾಸ್ಯನು ಬ್ರಹ್ಮ ಸರಸ್ವತಿಯರ ಆರಾಧ್ಯದೈವವಾಗುವನು.

ಈ ಕೆಳಕಂಡ ನೀತಿಗಳಿಂದ ಅವತಾರದ ಮಹಾತ್ಮೆ ಕಳಶಪ್ರಾಯದಂತೆ ಕಂಡುಬರುವುದು- (1) ವೇದವನ್ನು ವಿರೋಧಿಸುವುದು ಪಾಪಕರ ಮತ್ತು ಈ ವಿರೋಧಿಯು ನಾಸ್ತಿಕನಾಗುವನು. (2) ಸೃಷ್ಟಿ–ಸ್ಥಿತಿ–ಲಯ–ಗಳಿಗೆಲ್ಲಾ ಭಗವತ್ಸಂಕಲ್ಪವೇ ಕಾರಣ (3) ಭಗವತ್‌ಕಟಾಕ್ಷದಿಂದ ರಜಸ್ತಮೋಗುಣಗಳು ನಾಶವಾಗಿ ಅಹಂಕಾರ ಮಮಕಾರಗಳು ತೊಲಗಿ ಸಾತ್ತ್ವಿಕಗುಣಗಳು ಮೂಡುವುವು

ಸೃಷ್ಟಿಯ ಆರಂಭದಲ್ಲಿ ಈ ಲೀಲಾಚೇಷ್ಟೆಯಾದ್ದರಿಂದ ಹಯಗ್ರೀವ ಅವತಾರ ಬಹಳ ಪುರಾತನವಾದದ್ದು. ಶ್ರೀಮದ್ಭಾಗವತದಲ್ಲಿ ಹೇಳಿರುವ ಮಹಾವಿಷ್ಣುವಿನ ಅವತಾರಗಳಲ್ಲಿ ಇದು ಬರುವುದಿಲ್ಲ ವರಾಹಾವತಾರದ ಮುಂಚೆ ಈ ಅವತಾರವಾಯಿತು ಎಂದು ಅಭಿಪ್ರಾಯವಿದೆ. "ಮಾವಾಹಿ ಅನ್ನೈಯಾಯ್" ಎಂದು ನಮ್ಮಾಳ್ವಾರರ ಅನಿಸಿಕೆ (ತಿರುವಾಯ್‌ಮೊಳಿ 2–8–5) 'ಮಾ' ಎಂದರೆ ಹಯಗ್ರೀವದೇವರಿಗೇ ಅನ್ವಯಿಸುವುದು ಮತ್ತು ಆತ್ರಿಕರ ದುಃಖಗಳನ್ನು ನಿವಾರಿಸಲು ಈ ರೀತಿ ತಿರ್ಯಕ್–ಸ್ಥಾವರ–ಜಂಗಮಾದಿ ರೂಪಗಳನ್ನು ತಾಳಿರುವನು ಭಗವಂತ ಎಂದು ವ್ಯಾಖ್ಯಾತಜ್ಞರುಗಳು ಅಭಿಪ್ರಾಯ ಪಟ್ಟಿದ್ದಾರೆ. ಭಗವನ್ನಾರಾಯಣನ ವ್ಯೂಹರೂಪಗಳಲ್ಲೊಂದಾದ ಅನಿರುದ್ಧನೇ ಹಯಗ್ರೀವಾವತಾರ ಮಾಡಿರುವುದು. ಬ್ರಹ್ಮನಿಗೆ ಮಾಡಿದ ಜ್ಞಾನೋಪ

ಶ್ರೀ ಸಿ. ಗೋವಿಂದಾಚಾರ್ಯ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11– 0 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12 00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಖರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು.) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ದೇಶವೇ ಹಯಶೀರ್ಷ ಪಂಚರಾತ್ರ ಅಥವ 'ಪಂಚರಾತ್ರ' ಎಂದು ಕರೆಯಲ್ಪಟ್ಟಿದೆ. ನರನಿಗೆ ನಾರಾಯಣನಿಂದ ಮೂಲ ಮಂತ್ರ ಹೇಗೋ, ಹಾಗೆ ಬ್ರಹ್ಮನಿಗೆ ಹಯಗ್ರೀವನಿಂದ ಏಕಾಕ್ಷರೀ ಮಂತ್ರೋಪದೇಶವಾಯಿತು. ತಿರುಮಷ್ಟಾಕ್ಷರಿಯಷ್ಟೇ ಪವಿತ್ರವಾದುದು. ಈ ಏಕಾಕ್ಷರೀಮಂತ್ರ. ಅಂಗನ್ಯಾಸ ಮಾಡಿದ ನಂತರ "ಧವಳನಳಿನನಿಷ್ಠಂ ಕ್ಷೀರಗೌರಂ ಕರಾಗ್ರೇ ಜಪವಲಯ ಸರೋಜ ಪುಸ್ತಕಾಭೀಷ್ಟದಾನೇ ದಧದಮಲ ವಸ್ತ್ರಂ ಕಲ್ಪಿತಾಭರಣಂ ತುರಗವದನಂ ವಿಷ್ಣುಂ ನೌಮಿದೇವಾರಿಜಿಷ್ಣುಂ" ಎಂಬ ಧ್ಯಾನ ಶ್ಲೋಕವನ್ನು ಮಾಡಿ, ಯಥಾಶಕ್ತಿ ಏಕಾಕ್ಷರೀ ಜಪವನ್ನು ನಿತ್ಯಾನುಸಂಧಾನ ಮಾಡುವುದು ರೂಢಿಯಲ್ಲಿದೆ ಇದೇರೀತಿ ಹಯಗ್ರೀವೋಪನಿಷತ್‌ನಲ್ಲಿ ಕಂಡು ಬರುವ 'ಹಯಗ್ರೀವಗಾಯತ್ರಿ' ಇನ್ನೊಂದು ಪವಿತ್ರ ಮಂತ್ರ

ವಿಶ್ವೋತ್ತೀರ್ಣಸ್ವರೂಪಾಯ
ಚಿನ್ಮಯಾನಂದರೂಪಿಣೇ
ತುಭ್ಯಂ ನಮೋ ಹಯಗ್ರೀವ
ವಿದ್ಯಾರಾಜಾಯ ವಿಷ್ಣವೇ
ಋಗ್ಯಜುಸ್ಸಾಮರೂಪಾಯ
ವೇದಾಹರಣಕರ್ಮಣೇ
ಪ್ರಣವೋದ್ಗೀತವಪುಷೇ
ಮಹಾಶ್ವಶಿರಸೇ ನಮಃ

'ಎಲ್ಲ ವೇದಶಾಸ್ತ್ರಗಳಿಗೂ, ವಿದ್ಯೆಗಳಿಗೂ ಅಧಿಪತಿಯಾದ ಚಿನ್ಮಯಾನಂದ ವಿಶ್ವರೂಪಿಯಾದ ಹಯಾಸ್ಯನಿಗೆ ನಮಿಸುವೆನು' ಎಂದು ಈ ಮಂತ್ರದ ಅರ್ಥ. ಅಶ್ವರೂಪದಲ್ಲಿ ಜ್ಞಾನೋಪದೇಶ ಮಾಡಿದ ಒಂದು ಸಂದರ್ಭ ಬೃಹದಾರಣ್ಯಕೋಪನಿಷತ್‌ನಲ್ಲಿ ಬರುವ ದಧ್ಯಂಗಾಥರ್ವಣನ ವೃತ್ತಾಂತ. ಇವನಿಗೆ ಇಂದ್ರನಿಂದ 'ಮಧುವಿದ್ಯೆ' ಎಂಬ ವಿದ್ಯೆಯು ಒಂದು ನಿಬಂಧನೆಗೊಳಪಟ್ಟು ಉಪದೇಶವಾಗಿತ್ತು. ಈ ನಿಬಂಧನೆಯೇನೆಂದರೆ, ಮಧುವಿದ್ಯೆಯನ್ನು ಬೇರೆಯವರಿಗೆ ಉಪದೇಶಿಸಿದರೆ, ದಧ್ಯಂಗಾಥರ್ವಣನ ಶಿರಸ್ಸನ್ನು ಇಂದ್ರನು ಕತ್ತರಿಸಿ ಹಾಕುವನು. ಪಸುಊರ ಅಥವ ಏನುಬಟ್ಟ ಈ ವಿದ್ಯೆಯು ಫಲ, ತನ್ನ ಇಂದ್ರಪದವಿಗೆಲ್ಲಿ ಧಕ್ಕೆ ಬರುವುದೋ ಎಂದು ಹೆದರಿ, ಇಂದ್ರನು ಈ ನಿಬಂಧನೆಯನ್ನು ಮಾಡಿದ್ದ. ಇದನ್ನು ತಿಳಿದ ಅಶ್ವಿನೀ ದೇವತೆಗಳು ದಧ್ಯಂಗಾಥರ್ವಣನ ಬಳಿ ಬಂದು ಉಪಾಯವನ್ನು ಹೇಳುವರು. ಅದೇನೆಂದರೆ, "ಎಲೆ ಋಷಿಯೇ, ನಿನ್ನ ಶಿರಸ್ಸನ್ನು ನಾವು ಈಗ ತೆಗೆದು, ಹಯಶಿರವನ್ನು ಅಳ್ಳಡುವೆವು. ನಂತರ ನೀನು ಮಧುವಿದ್ಯೆಯನ್ನು ನಮಗೆ ಉಪದೇಶಿಸು. ಇದನ್ನು ತಿಳಿದ ಇಂದ್ರನು ನಿನ್ನ ಶಿರವನ್ನು ತೆಗೆದು

ಹಾಕುವನು. ನಂತರ ಮೊದಲಿನಂತೆ ನಿನ್ನ ಶಿರಸ್ಸನ್ನೇ ಇಡುವೆವು" ಅಶ್ವಿನೀದೇವತೆಗಳ ಯೋಜನೆಯಂತೆಯೇ ಎಲ್ಲವೂ ನೆರವೇರುವುದು. ಈ ಜ್ಞಾನೋಪದೇಶವು ಗುರುಮುಖೇನ ಪ್ರಾಪ್ತಿಯಾಗಬೇಕು. ಜ್ಞಾನಾನಂದಮಯನಾದ ಆ ಹಯಗ್ರೀವನಿಂದಲೇ ಜ್ಞಾನಭಿಕ್ಷೆಯನ್ನು ಪಡೆಯಬೇಕು. ಮಾನವರಲ್ಲದೆ ದೇವತೆಗಳೂ ಸಹ ಇಂಥ ಭಿಕ್ಷೆಯನ್ನು ಪಡೆಯಲು ಹಂಬಲಿಸುವರು.

ವೇದಾಚಾರ್ಯನಾದ ಹಯಗ್ರೀವನಿಗೂ ಮತ್ತು ಗೀತಾಚಾರ್ಯನಾದ ಕೃಷ್ಣನಿಗೂ ಪರಸ್ಪರ ಹೋಲಿಕೆಯಿದೆ. ಇಬ್ಬರೂ ಪರಮಾಚಾರ್ಯರು. ಇವರು ಉಪದೇಶಿಸಿದ ಪಂಚರಾತ್ರ ಮತ್ತು ಗೀತೆ ಭಾಗವತಧರ್ಮ ಪ್ರತಿಪಾದಕವಾಗಿವೆ. ಇಬ್ಬರಿಗೂ 'ಮಧುಸೂದನ' ಎಂಬ ದಿವ್ಯನಾಮವಿದೆ. ಮಧು–ಕೈಟಭರನ್ನು ಜಯಿಸಿದ್ದರಿಂದ ಹಯಗ್ರೀವನಿಗೆ ಈ ಪದ ಅನ್ವಯಿಸುವುದು. "ಹಯಗ್ರೀವೋ ಮಹಾವಿಷ್ಣುಃ ಕೇಶವೋ ಮಧುಸೂದನಃ" (ದೇಶಿಕರ ಹಯಗ್ರೀವಸ್ತುತಿ). ನಮ್ಮಾಳ್ವಾರರೂ ಸಹ 'ಮಧುಸೂದ' ಎಂದೇ ಹಾಡಿದ್ದಾರೆ (ತಿರುವಾಯಿಮೊಳಿ 1–5–5)

ಹಯಗ್ರೀವಸ್ವಾಮಿಯ ವಿಭವ ಮತ್ತು ಅರ್ಚಾಮೂರ್ತಿಯ ವರ್ಣನೆ ಮಹಾಭಾರತ, ದೇಶಿಕರ ಮತ್ತು ವಾದಿರಾಜರ ಗ್ರಂಥಗಳಲ್ಲಿ ಕಂಡು ಬರುವುದು. ಭಗವನ್ನಾರಾಯಣನಿಗೆ ಆಯಾ ಯುಗಗಳಲ್ಲಿ ಬೇರೆ ಬೇರೆ ಬಣ್ಣವಿರುವುದು. ಕೃತಯುಗದಲ್ಲಿ ಸ್ಫಟಿಕವರ್ಣ, ಮತ್ತು ಇತರ ಯುಗಗಳಲ್ಲಿ ಹಿರಣ್ಯವರ್ಣ, ನೀಲ ಮೇಘ ಶ್ಯಾಮವರ್ಣ ಇರುವುದು, ಆದ್ದರಿಂದ ಹಯಗ್ರೀವನು ಸ್ಫಟಿಕವರ್ಣದವನು "ನಿರ್ಮಲ ಸ್ಫಟಿಕಾಕೃತಿಂ ಎಂದು ದೇಶಿಕರು ಸ್ತುತಿಸಿದ್ದಾರೆ. ಶರೀರವು ಚಂದ್ರನ ಬೆಳದಿಂಗಳನಂತೆ ಇದೆ. "ಕಾಯೇನಭೂತ್ವಾ ಚಂದ್ರ ಪ್ರಭಸ್ತದಾಕೃತ್ವ" (ಶಾಂತಿಪರ್ವ–48) ಮುಖವು ವೇದಗಳ ಆಲಯವಾಗಿಯೂ ಚಂದ್ರಸೂರ್ಯರೇ ಕಣ್ಣುಗಳಾಗಿ, ಗೋಲೋಕ ಬ್ರಹ್ಮಲೋಕಗಳು ತುಟಿಗಳಾಗಿ, ವಿದ್ಯೆಯೇ ನಾಲಿಗೆಯಾಗಿ ಭೂಮ್ಯಾಕಾಶದಂತೆ ಕಿವಿಗಳು, ಸೂರ್ಯನ ಕಿರಣಗಳೇ ಕೂದಲಾಗಿ, ತಮೋಮಯವಾದ ಕಾಳರಾತ್ರಿಯೇ ಕುತ್ತಿಗೆಯಾಗಿ ಹಯಗ್ರೀವರೂಪವು ಸಂಘಟಿತವಾಗಿದೆ

ಎಲ್ಲಾ ಹಯಗ್ರೀವ ಅರ್ಚಾಮೂರ್ತಿಯೂ ಹೇಷಾಘೋಷಣೆಯ (ಕೆನೆಯುವ) ರೂಪದಲ್ಲಿರುವುದು. ಅವನ ಹೇಷಾಹಲಹಲ ಅಥವ ಹೇಷಾರವವೇ ವೇದದ ಆದಿ ಮತ್ತು ಉಸಿರೇ ವೇದದ ರಾಶಿ ('ಹೇಷಾಂಡುಷಾಂ' – ಹಯಗ್ರೀವಸ್ತೋತ್ರ ಮಂಜರಿ–14) ಇವನ ಶಕ್ತಿಲೇಶದಿಂದಲೇ ಬ್ರಹ್ಮಾದಿಗಳು ಸರಸ್ವತಿ, ಮಹರ್ಷಿಗಳು, ದಾನವರೂ, ಕವಿಶ್ರೇಷ್ಠರುಗಳೂ, ಶುಕಪರಾಶರಾದಿಗಳು ಜ್ಞಾನಸಂಪನ್ನರಾಗಿ ವಿದ್ಯಾಪಾರಂಗತರಾಗಿ ಪ್ರಕಾಶಿಸುವರಾಗಿದ್ದಾರೆ. ಇದನ್ನೆ ನಮ್ಮಾಳ್ವಾರರು "ವೇದವರ್ ವಯಿನ್ ಪಿರ್ತ್ತಾನ್" (ತಿ. 2–10–10) ಎಂದು ಹೇಳಿದ್ದಾರೆ. "ಹಯಗ್ರೀವನು ಎಲ್ಲರಿಗೂ ವೇದಶಾಸ್ತ್ರಗಳನ್ನು ವಿಸ್ತರಿಸಿದನು ಮತ್ತು ಎಲ್ಲರೂ ವೇದವೆಂಬ ಅಮೃತವನ್ನು ಪಾನ ಮಾಡಿದರು" ಎಂದು ಹಿರಿಯ ಆಚಾರ್ಯರುಗಳು ವ್ಯಾಖ್ಯಾನಮಾಡಿದ್ದಾರೆ. ಸತ್ತ್ವಮಯವಾದ ಶರೀರವುಳ್ಳ ಹಯಾಸ್ಯನು ತನ್ನ ಎಡಗೈಯಲ್ಲಿ ಪುಸ್ತಕವನ್ನು (ಜ್ಞಾನವಿಜ್ಞಾನದ ನಿಧಿ) ಹಿಡಿದು, ಬಲಗೈಯಲ್ಲಿ ವ್ಯಾಖ್ಯಾಮುದ್ರೆತೋರಿದ್ದಾನೆ. ಇದು ಮೋಹಕವಾಗಿದೆ. ಸ್ಫಟಿಕಮಣಿಯಂತೆ ಶೋಭಿತನಾಗಿ ಬಿಳಿಯ ತಾವರೆಯ ಮೇಲೆ ಲಕ್ಷ್ಮೀಸಮೇತ ಆಸೀನನಾಗಿದ್ದಾನೆ ಎಂದು ದೇಶಿಕರು ತಮ್ಮ 'ಹಯಗ್ರೀವಸ್ತುತಿ'ಯಲ್ಲಿ ವರ್ಣಿಸಿದ್ದಾರೆ. "ವಿದ್ಯಾಸಹಾಯವಾನ್ ಪ್ರಭು" ಎಂದು ಹಯಶಿರೋಪಾಖ್ಯಾನದಲ್ಲಿ ಸೂಚನೆಯಿದೆ. ಸಹಾಯವಾನ್ ಎಂದರೆ, ಭಗವಂತನ ಸೃಷ್ಟಿ–ಸ್ಥಿತಿ ಕಾರ್ಯಗಳಲ್ಲಿ ಜೊತೆಯಾಗಿ ಸಹಾಯಮಾಡುವವಳಾದ ವಿದ್ಯಾಲಕ್ಷ್ಮೀ ಎಂದು ಅರ್ಥವಾಗುವುದು.

ಆಳ್ವಾರುಗಳ ಕಾಲದಲ್ಲಿ ಯಾವ ದಿವ್ಯದೇಶದಲ್ಲಾಗಲಿ ಅಥವ ರಾಜಗೋಪುರಗಳಲ್ಲಾಗಲಿ, ಹಯಗ್ರೀವ ಅರ್ಚಾಮೂರ್ತಿಯಾಗಲಿ, ಅಥವ ದಿವ್ಯಮೂರ್ತಿಯಾಗಲಿ ಕಂಡುಬರುವುದಿಲ್ಲ. ಔಷಧಾಚಲದಲ್ಲಿರುವ (ತಿರುವಹೀಂದ್ರಪುರ) ಹಯಗ್ರೀವಮೂರ್ತಿಯು ದೇಶಿಕರ ಕಾಲದ್ದು ಎಂದು ಅಭಿಪ್ರಾಯವಿದೆ. ತಿರುಮಂಗೈಆಳ್ವಾರರು ಹಯಗ್ರೀವ ವಿಭವ ಅವತಾರವನ್ನು ತಿರುವೆಳ್ಳೈ ಮತ್ತು ತಿರುವಿಂದಳೂರ್ ಕ್ಷೇತ್ರಗಳಲ್ಲಿ 'ಪಳಮುಹಮಾಯ್' ಎಂದು ಸ್ತುತಿಸಿದ್ದಾರೆ

(1) ಪರಿಯಾಯ್ ನಾನ್ಮರೈಕೆಡುತ್ತು (ಪೆ. ತಿ. 7–8–2) (2) ಮುನ್ ಇವ್ವುಲಹೇಳುಮ್ ಇರುಳ್ ಮಣ್ಣಿಯ (ಪೆ. ತಿ. [illegible]–8–2). ಈ ಎರಡು ಸಂದರ್ಭದಲ್ಲಿಯೂ ಅವರು "ಅಂದು ಹಯಗ್ರೀವನಾಗಿ ವೇದಗಳನ್ನು ಬ್ರಹ್ಮಾದಿಗಳಿಗೆ ದಯಪಾಲಿಸಿ ಎಲ್ಲರನ್ನೂ ತೃಪ್ತಿಗೊಳಿಸಿ ಲೋಕಾನುಗ್ರಹವನ್ನು ಮಾಡಿದೆ. ಇಂದು ಇಲ್ಲಿ ಪುಂಡರೀಕಾಕ್ಷನಾಗಿಯೂ ಮತ್ತು ಗೋಸಖನಾಗಿ, ರಾರಾಜಿಸುತ್ತಿರುವವನೇ ನನಗೆ ದಾಸ್ಯವನ್ನು ಕೊಡು" ಎಂದು ಮಂಗಳಾಶಾಸನ ಮಾಡಿದ್ದಾರೆ. ಅವರ ಈ ರಚನೆ ಪುರಾಣಾಧಾರ ಸಹಿತವಾಗಿವೆ.

ಆಚಾರ್ಯರು – ಹಯಗ್ರೀವ – ಹಯಾಸ್ಯನು ಆಚಾರ್ಯರೂಪಿಯಾಗಿ ಧರೆಗಿಳಿದು ಬಂದು ಶಾಸ್ತ್ರಕಾರರು, ಭಗವದ್ಭಕ್ತರು ಮತ್ತು ಭಾಗವತರುಗಳ ಭಕ್ತಿ ಮತ್ತು ಪ್ರೀತಿ ವಾಕ್ಯಗಳಿಗೆ ಪಾತ್ರನಾಗಿದ್ದಾನೆ. ಆಳವಂದಾರರ ಅಭೀಷ್ಟದಂತೆ ರಾಮಾನುಜರು ಕಾಶ್ಮೀರಕ್ಕೆ ತೆರಳಿ ಬಹಳ ಶ್ರಮಪಟ್ಟು 'ಬೋಧಾಯನವೃತ್ತಿ'ಯನ್ನು ಪಡೆದುಕೊಂಡ. ಇದನ್ನು ಪರಿಶೀಲಿಸಿ ಶ್ರೀಭಾಷ್ಯವನ್ನು ಬರೆದರು. ಇದನ್ನು ನೋಡಿ ಮೆಚ್ಚಿ ತೃಪ್ತಿಗೊಂಡ ಸರಸ್ವತೀದೇವಿಯು ಶ್ರೀಭಾಷ್ಯವನ್ನು ತನ್ನ ಶಿರಸ್ಸಿನಲ್ಲಿ ಇಟ್ಟುಕೊಂಡಳು. ಮೆಚ್ಚುಗೆಯ ಸಂಕೇತವಾಗಿ ರಾಮಾನುಜರಿಗೆ 'ಶ್ರೀಭಾಷ್ಯಕಾರರ್' ಎಂಬ ಬಿರುದನ್ನೂ ಮತ್ತು ತನ್ನ ಆರಾಧ್ಯಮೂರ್ತಿಯಾದ ಹಯಗ್ರೀವ ಸ್ವಾಮಿಯನ್ನೂ, ಉಡುಗೊರೆಯಾಗಿ ಕೊಟ್ಟಳು, ಎಂದು ಪರಕಾಲ ಗುರುಪರಂಪರೆ ತಿಳಿಸುವುದು. ಈ ಪ್ರಸಂಗ ನಡೆದದ್ದು ಸುಮಾರು 800 ವರ್ಷಗಳ ಹಿಂದೆ, ಕಾಶ್ಮೀರದ ಸರಸ್ವತೀಮಠದಲ್ಲಿ. ಕ್ರಮೇಣ ಈ ಮೂರ್ತಿಯು ರಾಮಾನುಜರ ಶಿಷ್ಯರಾದ ಪಿಳ್ಳಾನ್, ಮತ್ತು ಪುಂಡರೀಕಾಕ್ಷರ ನಂತರ ವೇದಾಂತದೇಶಿಕರಿಗೆ ಲಭ್ಯವಾಯಿತು. ಇದು ಲಭ್ಯವಾದ ಮುಹೂರ್ತ ಬಹಳ ಮಂಗಳಕರವಾದದ್ದು ಎಂದು ಹೇಳಬೇಕು. ದೇಶಿಕರ ಪ್ರೌಢಿಮೆ, ಕೀರ್ತಿ ಮತ್ತು ವ್ಯಕ್ತಿತ್ವ ಹಿಮಾಲಯ ಶಿಖರಕ್ಕೇರಿತು. ಇವರಿಗೋಸ್ಕರವೇ ಅವತಾರವಾಯಿತೇನೋ ಎನ್ನುವಂತಿದೆ, ಮಠ ದೇಗುಲಗಳಲ್ಲಿ ದೇಶಿಕರ ಸನ್ನಿಧಿಯಲ್ಲಿ ಹಯಗ್ರೀವ ಅರ್ಚಾಮೂರ್ತಿ ಇರುವುದು ಇವರಿಬ್ಬರೂ ಒಂದೇ ನಾಣ್ಯದ ಎರಡು ಮುಖಗಳಂತಿದ್ದಾರೆ. ಔಷಧಾಚಲದಲ್ಲಿ ಹಯಗ್ರೀವನು ಇವರಿಗೆ ಜ್ಞಾನಮಂತ್ರವನ್ನು ಅನುಗ್ರಹಿಸಿದನು. ಆ ಕ್ಷಣವೇ ಮೂವತ್ತೆರಡು ಶ್ಲೋಕಗಳುಳ್ಳ ಹಯಗ್ರೀವ ಸ್ತೋತ್ರವನ್ನು, ನಂತರ ಇತರ ಗ್ರಂಥಕೃತಿಗಳನ್ನು ರಚಿಸಿದರು. ಅವನ ಪ್ರೇರಣೆಯಿಂದಲೇ, ಅನೇಕ ಪಂಡಿತರು ಮತ್ತು ಕವಿಗಳನ್ನು ವಾದದಲ್ಲಿ ಸೋಲಿಸಿ 'ಕವಿತಾರ್ಕಿಕ ಸಿಂಹ' ಎಂಬ ಬಿರುದನ್ನು ಪಡೆದರು. "ಅವನು ನನಗೆ ಪರಮ ದೇಶಿಕ" ಎಂದು ಹಯಾಸ್ಯನನ್ನು ಸಂಬೋಧಿಸಿದ್ದಾರೆ. ಇವರ ನಂತರ ಈ ಮೂರ್ತಿಯು ಬ್ರಹ್ಮತಂತ್ರ ಜೀಯರಿಂದ ಪರಕಾಲ ಆಸ್ಥಾನಕ್ಕೆ ಪ್ರಾಪ್ತವಾಯಿತು. ಈ ಪರಕಾಲ ಪರಂಪರೆಯಲ್ಲಿ ಪೇಯ ಪರಕಾಲಸ್ವಾಮಿಗಳು ಹಯಗ್ರೀವ ವೃತ್ತಾಂತಕ್ಕೆ ತಮ್ಮದೇ ಆದ ವ್ಯಾಖ್ಯಾನದ ಮೂಲಕ ಹೊಸ ರೂಪವನ್ನು ಕೊಟ್ಟಿದ್ದಾರೆ. 31 ನೇ ಸ್ವಾಮಿಗಳಾದ ಶ್ರೀಕೃಷ್ಣಬ್ರಹ್ಮತಂತ್ರರು "ಹಯಗ್ರೀವ ಸುಪ್ರಭಾತ"ವನ್ನು ರಚಿಸಿದ್ದಾರೆ. 33 ನೇ ಯುವ

ರಾದ ಅಭಿನವ ರಂಗನಾಥಸ್ವಾಮಿಗಳು "ಹಯಶಿರೋರತ್ನಮಾಲಿಕಾಸ್ತುತಿ" ಎಂಬ ಕೃತಿಯನ್ನು ರಚಿಸಿದ್ದಾರೆ. ಈ ರೀತಿ 34 ಪೀಠಾಧಿಪತಿಗಳಿಂದ ಪೂಜಿಸಲ್ಪಟ್ಟ, ಹಯಾಸ್ಯನು, ಇಂದು 35 ನೇ ಆಚಾರ್ಯರಾದ ಶ್ರೀಮದಭಿನವರಾಮಾನುಜ ಪರಕಾಲ ಯತಿವರ್ಯರಿಂದ ತ್ರಿಕಾಲದಲ್ಲಿ ಪೂಜಿಸಲ್ಪಟ್ಟು, ಮೈಸೂರು ನಗರದ ಪರಕಾಲ ಮಠದಲ್ಲಿ ರಾರಾಜಿಸುತ್ತಿದ್ದಾನೆ. ಈ ಸ್ವಾಮಿಗಳು ಹಯಗ್ರೀವನನ್ನು 'ಎನ್ನಪ್ಪನ್' ಎಂದೇ ಸಂಬೋಧಿಸುತ್ತಾರೆ. ಇದು ಅವರ ಭಕ್ತಿ ವೈರಾಗ್ಯದ ಸಂಕೇತವೇ ಆಗಿದೆ.

ಹಯಗ್ರೀವನಿಗೂ ದ್ವೈತಿಗಳಿಗೂ ಬಹಳ ನಂಟಿದೆ. ಮಧ್ವಾಚಾರ್ಯರು, ಹಯಗ್ರೀವೋಪಾಸಕರಲ್ಲದಿದ್ದರೂ, ಆಗಮಶಾಸ್ತ್ರದಲ್ಲಿ ಹಯಗ್ರೀವನನ್ನು ಸ್ತುತಿಸುತ್ತಿದ್ದರು. ಇವರ ನಂತರ ಬಂದವರು ಸೋದಾಮಠದ 20 ನೇ ಪೀಠಾಧಿಪತಿಗಳು, ವಾದಿರಾಜರು (ವಾದಿರಾಜ–ಸೋದಾ ರಾಜ' – ಗುರುಚರಿತಾಮೃತ ಬಿಂದು) ಇವರು ಏಕದೇವ ಹಯಾಸ್ಯೋಪಾಸಕರು ಮತ್ತು ಪರಮೈಕಾಂತಿಗಳು. ಇವರ ಪೂರ್ವಾಶ್ರಮದ ಹೆಸರು. 'ಭೂವರಾಹ' ಎಂದು ಪೂರ್ಣವಾಗಿ ಹಯಾಸ್ಯನ ಅನುಗ್ರಹವು ಬಾಲ್ಯದಿಂದಲೇ ಉಂಟಾಗಿದ್ದುದನ್ನು ಕಂಡ ಗುರುಗಳು ಇವರನ್ನು 'ವಾದಿರಾಜ' ಎಂದು ಕರೆದರು. ವಿಗ್ರಹ ಮತ್ತು ಸಾಲಿಗ್ರಾಮ – ಇವೆರಡನ್ನು ಆರಾಧಿಸುತ್ತಿದ್ದರು. ಇವರು ನಿವೇದನ ಮಾಡುತ್ತಿದ್ದ 'ಹಯಗ್ರೀವ' ಎಂಬ ಭಕ್ಷ್ಯವನ್ನು ದೇವರು ಕುದುರೆಯ ರೂಪದಲ್ಲಿ ಬಂದು ತಿಂದು ಹೋಗುವುದು ವಾಡಿಕೆಯಾಗಿತ್ತು. ಹಯಗ್ರೀವನ ಪ್ರೇರಣೆಯಿಂದ ಅನೇಕ ಪವಾಡಗಳನ್ನೂ, ದೇವತಾಕಾರ್ಯಗಳನ್ನು ಮಾಡಿದ್ದಲ್ಲದೆ, ಅನೇಕ ಕೃತಿಗಳನ್ನೂ ಮತ್ತು ಗ್ರಂಥಗಳನ್ನೂ ರಚಿಸಿದ್ದಾರೆ 'ಹಯವದನ' ಮತ್ತು 'ಸಿರಿಹಯವದನ' ಎಂಬ ಅಂಕಿತದಿಂದ ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆ. 62 ಸ್ತೋತ್ರಗಳಲ್ಲಿ 'ಹಯಸ್ತುತಿ', 'ಪಂಚಕ' ಮತ್ತು ಧ್ಯಾನಪ್ರಕರಣಗಳು ಸೇರಿವೆ. ಆಚಾರ್ಯಮೂರ್ತಿಯು ಸಮಸ್ತ ಭಾರತದಲ್ಲಿರುವ ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ರಾಜಮಹಾರಾಜರುಗಳಿಂದ 'ಹಯಾಸ್ಯಾರಾಧಕ ಗುರುಸಾರ್ವಭೌಮ', 'ಶ್ರೀ ಹಯವದನಮೂರ್ತಿ ದಿವ್ಯಪಾದುಕಾಸೇವಕ ಧುರೀಣ' ಇತ್ಯಾದಿ ಬಿರುದುಗಳನ್ನು ಪಡೆದಿದ್ದಾರೆ. ಸಶರೀರಿಯಾಗಿ ಬೃಂದಾವನವನ್ನು ಸೇರುವರು. ಪರಮಪದ ಸೇರುವ ಮುನ್ನ ಹಯಗ್ರೀವನು ಇವರಿಗೆ ತನ್ನ ಪೂರ್ಣರೂಪವನ್ನು ಮತ್ತು ದಶಾವತಾರಲೀಲೆಯನ್ನು ತೋರುವನು. ಇವರ ವೃತ್ತಾಂತ ಬಹುಮಟ್ಟಿಗೆ ದೇಶಿಕರ ವೃತ್ತಾಂತವನ್ನು ಹೋಲುವುದು.

★

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ : ಬೆಳಗ್ಗೆ 6–00, ಬೆಳಗ್ಗೆ 10–00, ಸಂಜೆ 3–00
ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 18 ರೂ. ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

# ಗೋಪಾಲದಾಸರ ಸುಳಾದಿಗಳು

ಹದಿನೆಂಟನೆಯ ಶತಮಾನದ ಹರಿದಾಸ ಪರಂಪರೆಯಲ್ಲಿ ಮುಖ್ಯವಾಗಿ ಕಂಡು ಬರುವ ಕೆಲವು ಹೆಸರುಗಳಲ್ಲಿ ವಿಜಯದಾಸರ ಪ್ರಮುಖ ಶಿಷ್ಯರಾದ ಗೋಪಾಲದಾಸರ ಹೆಸರೂ ಒಂದು. ಎಲ್ಲ ಹರಿದಾಸರಂತೆ ಇವರೂ ಕೀರ್ತನೆಗಳು, ಉಗಾಭೋಗಗಳು ಹಾಗೂ ಸುಳಾದಿಗಳನ್ನು ರಚಿಸಿದ್ದಾರೆ. ಸಂಗೀತದ ಸಪ್ತ ತಾಳಗಳಲ್ಲಿ ಒಂದೊಂದು ತಾಳದಲ್ಲಿ ಹಾಡಬರುವ ಚಿಕ್ಕ ಪ್ರಬಂಧಗಳೇ ಸುಳಾದಿಗಳು.

ಪ್ರಸ್ತುತ, ಗೋಪಾಲದಾಸರ ಸುಳಾದಿಗಳನ್ನು ಅಭ್ಯಸಿಸುವಾಗ ಪ್ರಧಾನವಾಗಿ ಕೆಲವು ಅಂಶಗಳು ಓದುಗರ ಗಮನ ಸೆಳೆಯುತ್ತವೆ. ಅವೆಂದರೆ ದಾಸರಿಗೆ ಭಗವಂತನಲ್ಲಿರುವ ಅನನ್ಯ ಭಕ್ತಿ, ಆತ್ಮಶೋಧನೆ ಹಾಗೂ ದ್ವೈತ ಮತ ನಿಷ್ಠೆ.

ಪ್ರತಿ ಜೀವಿಯೂ ಮುಕ್ತಿಯನ್ನು ಸಾಧಿಸಬೇಕಾದರೆ ಭಕ್ತಿಯೇ ಸಾಧನವೆಂಬುದಾಗಿ ಹರಿದಾಸರು ನಂಬಿದ್ದಾರೆ. ಭಕ್ತಿಯ ಸಾಧನೆಯಲ್ಲಿ ಹರಿ ಪ್ರಿಯರಾದ ಭಕ್ತರ ಸಂಗವಿದ್ದರಂತೂ ಬಹಳ ಲಾಭ. ಆದ್ದರಿಂದಲೇ ಹರಿದಾಸರಿಗೆ ಹರಿಭಕ್ತರು ದೈವಸಮಾನರು. ಭಕ್ತಿಯೆಂದರೆ ಜೀವಿ ಹರಿಯಲ್ಲಿಟ್ಟಿರುವ ಅನನ್ಯವಾದ ಪ್ರೀತಿ ಎನ್ನಬಹುದು ಈ ಭಕ್ತಿಯನ್ನು ವಿಧವಿಧ ರೀತಿಗಳಲ್ಲಿ ದಾಸರು ತೋಡಿಕೊಂಡಿದ್ದಾರೆ.

ಭಗವಂತನ ಮಹಿಮೆಯನ್ನರಿತು, ಅವನ ರೂಪ, ಶಕ್ತಿ, ಗುಣ, ನಾಮಗಳ ಮಹತ್ತ್ವವನ್ನು ಏಕಾಗ್ರಚಿತ್ತದಿಂದ, ಶಾಂತಭಾವದಿಂದ ಸ್ಮರಿಸಿರುವ ಅನೇಕ ಸುಳಾದಿಗಳು ಗೋಪಾಲದಾಸರಲ್ಲಿವೆ. ಉದಾಹರಣೆಗೆ ಕೆಲವು ಸಾಲುಗಳನ್ನು ನೋಡಬಹುದು:

ಹರಿಯೆ ಸರ್ವೋತ್ತಮ ಹರಿಯೆ ಪರದೈವ
ಪರಿಪೂರ್ಣ ಗುಣಭರಿತ ನಿರಾಶ್ರಯಾನಂತ
ಪರತತ್ತ್ವ ಪರಿಪೂಜ್ಯ ಪರಮ ಮಂಗಳಮೂರ್ತಿ
ಸಿರಿದೇವಿ ಪರಮೇಷ್ಠಿ ಹರರಿಂದ ವಂದಿತ
ಸ್ವರಮಣ ಶ್ರುತಿಪಾದ್ಯ ಜರಾಮರಣರಹಿತ
ಸುರರ ಪಾಲಕನೆ ನಿರ್ದೋಷಿ ಶಿಖಾಮಣಿ...
...ಗರುಡವಾಹನ ಚೆಲುವ ಸ್ಥಿರಭಕುತರೊಡೆಯ
ಸಿರಿ ದ್ರೌಪದಿ ಅಭಿಮಾನರಕ್ಷಕ ದೇವ
ಸ್ಮರಣೆಮಾತ್ರದಲ್ಲಿ ಅಜಮಿಳನ ರಕ್ಷಿಸಿದಂತೆ
ಪರಮದಯಾಳು ಗೋಪಾಲ ವಿಠಲರೇಯ
ಸರಿಯಿಲ್ಲದ ದೈವ ಮೊರೆಹೊಕ್ಕೆ ಕಾಯೊ ॥

ಹರಿ ಒಡೆಯ, ತಾನೇನಿದ್ದರೂ ಅವನ ಸೇವಕನೆಂಬ ದಾಸ್ಯಭಾವದಿಂದ, ಹರಿಯಲ್ಲಿ ಭಕ್ತಿಯನ್ನು ತೋಡಿಕೊಂಡಿರುವ ಅನೇಕ ಸುಳಾದಿಗಳಿವೆ.

ಹರಿ ನೋಡಿಸಿದುದೆಲ್ಲ ನೋಡುವೆನಯ್ಯ ನಾನು ।
ಹರಿ ಕೇಳಿಸಿದರಿನ್ನು ಕೇಳುವೆನಯ್ಯ ನಾನು ।
ಹರಿ ನುಡಿಸಲಾಗಿನ್ನು ನುಡಿವೆನಯ್ಯ ನಾನು...

ಎಂಬ ಸುಳಾದಿಯೊಂದರ ಸಾಲುಗಳು ಮೇಲಿನ ಮಾತಿಗೆ ಸಾಕ್ಷಿ.

ಭಗವಂತನನ್ನು ಸಖನಾಗಿ ಭಾವಿಸಿ, ಸಲಿಗೆಯಿಂದ, ತನ್ನ ಭಾವನೆಗಳನ್ನು ತೋಡಿಕೊಂಡಿರುವ ಸುಳಾದಿಗಳು ಕೆಲವಿವೆ. ಕೆಲವು ಸಾಲುಗಳನ್ನು ನೋಡಿ:

ಒಡೆಯ ನಿನಗೆ ಮೊರೆಯಿಡುತಲಿದ್ದರೆ ಎನ್ನ
ಕಡೆಗೆ ನೋಡಲೊಲ್ಲೆ ಬಡಿವಾರ ನಿನಗೆಷ್ಟೊ
ತಡೆಯದೆ ನಾನೊಂದು ನುಡಿಯ ನುಡಿವೆನಯ್ಯ
(ಕಡುಗುಮ್ಮ) ನಾರುತ ಮಡುವಿನೊಳಗೆ ಸೇರು
ಬಿಡದೆ ಬೆಟ್ಟವ ಪೊತ್ತು ಕಡಲೊಳಗಿರು ನೀನು
ಅಡವಿಸೂಕರ ಜನ್ಮ ಬಿಡದೆ ಬರಲಿ ನಿನಗೆ
ಕೆಡಲಿ ನಿನ್ನ ರೂಪ ಕಡುಘೋರನಾಗೆಲೊ...
ಕಡುದಯಾಸಾಗರ ಗೋಪಾಲ ವಿಠಲರೇಯ
ಹಿಡಿದು ಬಿಡೆನೊ ನಿನ್ನ ಬಹುಪರಾಧಾರಿ ॥

ವಾತ್ಸಲ್ಯಭಾವದ ಮೂಲಕ ಭಕ್ತಿ ಪ್ರತಿಪಾದನೆ ಮಾಡಿರುವ ಸುಳಾದಿಗಳು ಬಹಳ ಕಡಿಮೆ. ಈ ರೀತಿಯ ಭಾವದಲ್ಲಿ ಪರಮಾತ್ಮ ಭಕ್ತರ ಸಂಬಂಧ ತಾಯಿ ಮಗುವಿನ ಸಂಬಂಧವಾಗಿರುತ್ತದೆ. ಸುಳಾದಿಯೊಂದರಲ್ಲಿ, ಉಡುಪಿಯ ಕೃಷ್ಣ ಕನಸಿನಲ್ಲಿ ಕಾಣಿಸಿಕೊಂಡು ಮಗನಾಗಿ ಮುದ್ದಿಸಿ ಮರೆಯಾದನಂತೆ, "ತಿಳಿಯದೆ ಸ್ವಪ್ನದಿ ಕಳವಳಕೆಯಿಂದ, ಸೆಳೆದು ನೂಕಿದೆನಲ್ಲ ಬಳಿಯನಿಲ್ಲಗೊಡದೆ, ಕಿಲಕಿಲನೆ ನಗುತ ಚಿನ್ನಬಾಲಕನಾಗಿ ಸುಳಿದು ಆಡಿದರು ತಿಳಿಯದೆ ನಾ ಪೋದೆ, ತಳಕು ಹಾಕಿ ಕಾಲು ತೊಡರಿಸಿಕೊಂಡರು, ಎಳೆದು ಎಳೆದು ನಿನ್ನ ಎಬ್ಬಟ್ಟಿದೆನಲ್ಲ" ಎಂದು ಪಶ್ಚಾತ್ತಾಪ ಪಡುತ್ತ, ಕನಸಿನಲ್ಲಿ ಕಂಡ ಶ್ರೀಹರಿಯ ಬಾಲರೂಪ, ಸದಾ ಮನಸ್ಸಿನಲ್ಲಾದರೂ ಮೂಡಲಿ ಎಂದು ಪ್ರಾರ್ಥಿಸುತ್ತಾರೆ.

ಪರಮಾತ್ಮ–ಭಕ್ತರಸಂಬಂಧವನ್ನು ಸತಿ–ಪತಿ ಭಾವದಿಂದ ಭಾವಿಸಿಕೊಂಡು ಭಕ್ತಿತೋರುವ ಮಧುರಭಾವದ ಸುಳಾದಿಗಳು ಗೋಪಾಲದಾಸರಲ್ಲಿ ಇಲ್ಲವೇ ಇಲ್ಲ ಎನ್ನಬಹುದು. ಒಂದೇ ಒಂದು ಸುಳಾದಿಯ ಕೆಲವು ಸಾಲುಗಳಲ್ಲಿ ಈ ಭಾವವಿದೆ. ಹರಿಸರ್ವ ಸ್ವತಂತ್ರ, ಸರ್ವಕರ್ತೃ ಎಂಬ ತತ್ತ್ವವನ್ನು ಹೇಳುತ್ತ "ಪತಿಯು ತಾನಾಗಿ ತನ್ನ ಸತಿಗೆ ಪಾಪ ಪುಣ್ಯದ ವ್ರತವ ಮಾಡೆಂದು ನಿರೂಪ ಕೊಡಲು ಇದೆ ಶ್ರುತಿ ಸ್ಮೃತಿ ನಿರ್ಣಯಗಳು ಪೇಳುತಲಿವೆ, ಪತಿ ನೀನು ಎನಗೆ ಸತಿಯು ನಿನಗೆ ನಾನು" ಆದ್ದರಿಂದ ನನ್ನ ವರ್ತನೆಗಳೆಲ್ಲ ನಿನ್ನ ನಿರೂಪಕ್ಕೆ ಅಧೀನವೆಂದಿದ್ದಾರೆ.

ಇಷ್ಟಲ್ಲದೆ ಹರಿಯ ದಶಾವತಾರಗಳನ್ನು ವರ್ಣಿಸಿ, ಒಂದೊಂದು ಅವತಾರದಲ್ಲೂ ತೋರಿದ ಅನೇಕ ಲೀಲೆಗಳನ್ನು ಬಣ್ಣಿಸಿ, ಭಕ್ತಿಯಿಂದ, ಅವನೇ ತನ್ನನ್ನು ಕಾಯಬೇಕೆಂದು ಕೋರಿದ್ದಾರೆ.

ಭಕ್ತಿಮಾರ್ಗಕ್ಕೆ ಕಾಲಿಟ್ಟನಂತರ, ಶ್ರೀಹರಿಯ 'ಸುಖಾನುಭವ' ವನ್ನು ಪಡೆಯುವವರೆಗೆ ಜೀವಿ ಅನೇಕ ರೀತಿಯಲ್ಲಿ ಮಾನಸಿಕ ತೊಳಲಾಟವನ್ನು ಅನುಭವಿಸುತ್ತಾನೆ. 'ಜೀವನ' ಎಂದರೇನೆಂದು ಅರ್ಥವಾಗಲು ಆರಂಭವಾದಾಗ ಹಿಂದಿನ ತನ್ನ ಬದುಕನ್ನು ಕುರಿತು ಪರಾಮರ್ಶಿಸಿಕೊಳ್ಳುತ್ತಾನೆ. ತನ್ನ ದೌರ್ಬಲ್ಯಗಳಿಗಾಗಿ ಪರಿತಪಿಸುತ್ತಾನೆ. ಗೋಪಾಲದಾಸರೂ ಇದೇ ಕೆಲಸವನ್ನು ಮಾಡಿದ್ದಾರೆ;

ಅನಂತ ಅಪರಾಧ ಎನ್ನಲ್ಲಿ ಉಂಟೊ ದೇವ
ಇನ್ನು ಮುಂದೆ ಆಗೋವು ಅನಂತವಿದ್ದರನ್ನ
ಮುನ್ನ ನಿನ್ನ ಆ ನಾಮವನ್ನು ನೆನೆಯದ
ಅನ್ನಂತ ಅಪರಾಧಕಧಿಕಾರಿ ಆನಾದೆನೊ ॥

ಎಷ್ಟೆಷ್ಟು ಜನ್ಮಗಳು ಬಂದು ಹೋದರೂ ಮನದ ಆಸೆ ನಾಶವಾಗಲಿಲ್ಲ, ವಿಷಯಾಸಕ್ತಿ ಕಮ್ಮಿಯಾಗಲಿಲ್ಲ:

ಕಚ್ಚಲೆನಗೆ ಕಾಮಕ್ರೋಧಗಳೆಂಬ ಕನ್ನಿಗಳು
ಪೆಚ್ಚುತ್ತೈ ಮೋಹಮದ ಮತ್ಸರವು
ಅಚ್ಚ ವಿಷಯಗಳೆಂಬೊ ಕಿಚ್ಚಿನೊಳಗೆ ಕೆಡಹಿ
ಹುಚ್ಚುಗೊಳಿಸುವುದಯ್ಯ ಎಚ್ಚರಿಸದಲಿನ್ನು

ಇದಕ್ಕೆ ಕಾರಣ ಪರಮಾತ್ಮನನ್ನು ನೆನೆಯದಿದ್ದುದೇ. ಈಗಲಾದರೂ ವಿಷಯಾಸಕ್ತಿಯನ್ನು 'ನುಚ್ಚಾಗುವಂತೆ' ಮಾಡಿ ತನ್ನನ್ನು ಕಾಪಾಡಬೇಕೆಂದು ದಾಸರು ಹರಿಯಲ್ಲಿ ಮೊರೆಯಿಟ್ಟಿದ್ದಾರೆ. "ಕಂಡಿರ್ಯಾ ಕಂಡಿರ್ಯಾ ಬೊಮ್ಮಾಂಡ ದೊಡೆಯನ, ಕಂಡಿರ್ಯಾ ಸರ್ವಜೀವರ ಪಶುಹಿಂಡು ಮಾಡಿ ಬಿಡದೆ ಕಾಯುವ ಗೋಪಾಲನ..." ಎಂಬ ಸುಳಾದಿಯೊಂದರ ಸಾಲುಗಳು ಪರಮಾತ್ಮನಿ

ಶ್ರೀಮತಿ ಎನ್. ಪುಷ್ಪ

ಗಾಗಿ ಹುಡುಕುತ್ತಿರುವ ದಾಸರ ಹಂಬಲವನ್ನೂ, ಆತುರವನ್ನೂ, ಇಹಜೀವನದಲ್ಲಿನ ಆಸಾಸಕ್ತಿಯ ತೀವ್ರತೆಯನ್ನೂ ಹೇಳುತ್ತದೆ.

ಒಟ್ಟಲ್ಲಿ ಈ ಸಾಂಸಾರಿಕ ಜಂಜಾಟಗಳ, ಫಲವಾಗಿ ಮನುಷ್ಯನಿಗೆ ಒದಗಿ ಬರುವ ನೋವು ನಲಿವುಗಳು, ಬಂಧನ, ಕ್ರೌರ್ಯಗಳಿಂದ ಬೇಸರಗೊಂಡ ಜೀವವೊಂದರ ಮಾನಸಿಕ ತೊಳಲಾಟವನ್ನು ದಾಸರು ಅತ್ಯಂತ ಆರ್ದ್ರವಾಗಿ, ಪದರ ಪದರವಾಗಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ತಮಗೆ ಜ್ಞಾನೋದಯವಾದ ಮೇಲೆ, ಅಂಧಕಾರದಲ್ಲಿ ಮುಳುಗಿರುವ ಕೆಲವರಿಗಾದರೂ, ಉಪದೇಶದಿಂದ ಮುಕ್ತಿಯದಾರಿಗೆ ಹಾದಿ ಮಾಡಿಕೊಡುವ ಆಸೆ ಗೋಪಾಲದಾಸರಲ್ಲಿ ಕಂಡುಬರುತ್ತದೆ. ಆದ್ದರಿಂದಲೇ ಉಪದೇಶವಾಣಿಯಂತಿರುವ ಕೆಲವು ಸುಳಾದಿಗಳು ಇದರಲ್ಲಿವೆ. "ಮೃತ್ಯುಕಾದಿಹುದಿನ್ನು ವ್ಯರ್ಥವೇತಕೆ ದಣಿವೆ. ಆರ್ತಿಕೊ ಇದೆ ವೇಳೆ ಮರ್ತು ಕಡದೆ, ತೀರ್ಥಪಾದನ ಪಾದ ಕೀರ್ತನೆ ಮಾಡು" ಎಂಬುದೇ ಗೋಪಾಲದಾಸರ ಉಪದೇಶ. 'ಸಂಸಾರ' ದಿಂದ ದೂರವಾಗಿ ಹರಿಯನ್ನು 'ಅರಿತು' ಅವನಲ್ಲಿ ಶುದ್ಧ ಭಕ್ತಿಯಿಡುವುದೇ ಮುಕ್ತಿಗೆ ಉಪಾಯ. ಈ ದಿಸೆಯಲ್ಲಿ ದಾಸರು 'ಮಡಿ' ಹಾಗೂ 'ವೈರಾಗ್ಯ'ದ ಅರ್ಥವನ್ನು ಹೇಳಿರುವ ರೀತಿ ಗಮನಾರ್ಹವಾಗಿದೆ.

ತೋರಿಕೆಯ ಮಡಿಯಿಂದಾರೂ ದೈವವನ್ನು ಮೆಚ್ಚಿಸಲಾರರು, "ನೀರ ಮಡುವಿನೊಳಗೆ ಪೋಗಿ ಬುಡುಗುಳಿಯಂತೆ ಮಿಂದು ಗುಡುಗುಡುಗುಟ್ಟುತಲಿ ನಡುವೆ ಮಂತ್ರಗಳು ಕಡುವೇಗ, ಪಟ್ಟೆನಾಮ ಬಡಿದು ಮುದ್ರೆಯ ಹಚ್ಚಿ ಜಡದೇಹ ತೊಳೆದು" ಮಡಿವಂತರೆಂದುಕೊಂಡರೆ ಆಗದು. ವಿಷಯಾಸಕ್ತಿಯಿಂದ ಮುಕ್ತವಾಗಿ ಹರಿಯಲ್ಲಿ ಮನಸ್ಸಿಡಬೇಕು. ಮಡಿಮಾಡದೆಯೇ ಶುದ್ಧ ಭಕ್ತಿ ತೋರಿದ, ಹರಿಗೆ ಪ್ರೀತಿಪಾತ್ರರಾದ ಪ್ರಹ್ಲಾದ, ಧ್ರುವ, ಕಡುಪಾತಕಿ ಅಜಾಮಿಳ, ಎಡೆಯ ಕೊಂಡೋಡಿದ ಹನುಮರು ತೋರಿದಂತಹ ಭಕ್ತಿ ತೋರಿದರೆ ಸಾಕು.

ಮನುಷ್ಯ ಮುಕ್ತಿಯನ್ನು ಸಾಧಿಸಬೇಕಾದರೆ, ಹರಿಯನ್ನಾರಾಧಿಸಬೇಕಾದರೆ ವೈರಾಗ್ಯಮಾರ್ಗದಲ್ಲಿ ನಡೆಯಬೇಕು, ನಿಜವಾದ ವೈರಾಗ್ಯವೆಂದರೆ "ರಾಗಭೋಗಂಗಳು ಆಗದೆ ಇರಲ್ಯಾಕೆ, ಯಾಗಂಗಳನು ಮಾಡಿ ಹರಿಗರ್ಪಿಸಿ ಸಮಭಾಗವೆರಡು ಹರಿಯಿಂದಾದುದೆಂದು ಭೋಗಿಸುತಿಪ್ಪುದು".

ಎಲ್ಲ ದಾಸರಂತೆಯೇ ತಮ್ಮ ದ್ವೈತಮತನಿಷ್ಠೆಯನ್ನು, ತಮ್ಮ ಕೃತಿಗಳಲ್ಲಿ ಗೋಪಾಲದಾಸರೂ ತೋರಿದ್ದಾರೆ. ಪ್ರಸ್ತುತ ಸುಳಾದಿಗಳೆಲ್ಲದರ ಹಿನ್ನೆಲೆ ದ್ವೈತತತ್ತ್ವಗಳೇ ಆಗಿವೆ. ಮಾಧ್ವತತ್ತ್ವಗಳನ್ನು ನಿರೂಪಿಸಿರುವ ಹಲವಾರು ಸುಳಾದಿಗಳು ಗೋಪಾಲದಾಸರಲ್ಲಿವೆ.

ಸಕಲ ಜೀವಿಗಳಲ್ಲೂ, ದೇವತೆಗಳಲ್ಲೂ ಹರಿಯೇ ಶ್ರೇಷ್ಠ. ಎಲ್ಲಕ್ಕೂ ಮೂಲ ಹರಿಯೇ ಹರಿ ವಿಶ್ವವ್ಯಾಪಿ, ಸರ್ವಜ್ಞ, ಅನಂತಾವತಾರಿ, ನಾನಾರೂಪಗಳನ್ನು ತಾಳಿದರೂ ಇಡೀ ಲೋಕಕ್ಕೆ ದೇವ ಒಬ್ಬನೇ. ಪಂಚಮಹಾಭೂತಗಳಲ್ಲೂ, ಪಂಚತನ್ಮಾತ್ರೆಗಳಲ್ಲೂ ವ್ಯಾಪ್ತನಾದ ಹರಿ ಸಾಕಾರ, ಜ್ಞಾನಾನಂದಪೂರ್ಣ ವೇದಾಂತವೇದ್ಯ ಎಂಬ ದ್ವೈತದ ಮೂಲತತ್ತ್ವಗಳನ್ನು ಸಾರುವ ಸುಳಾದಿಯೊಂದರ ಕೆಲವು ಸಾಲುಗಳನ್ನು ನೋಡಿ :

ಆವ ವಿಷ್ಣುನೆ ಜೀವದಂಗುಟಮಾತ್ರ ಮೂರುತಿ
ಆವ ವಿಷ್ಣುನೆ ಜೀವದಾಕಾರ ಮೂರುತಿ
ಆವ ವಿಷ್ಣುನೆ ಸರ್ವವ್ಯಾಪ್ತ ಮೂರುತಿ
ಆವ ವಿಷ್ಣುನೆ ಜೀವಕ್ಕಾವರ್ಕವಾದ ಮೂರುತಿ
ಆವ ವಿಷ್ಣುನೆ ಜೀವಾಧಿಷ್ಠಾನ ದೇಹ ಮೂರುತಿ
ಆವ ವಿಷ್ಣುನೆ ಮೂಲದವತಾರ ಮೂರುತಿ
ಆವ ವಿಷ್ಣುನೆ ಮಧ್ಯ ಅಜಾದಿ ಮೂರುತಿ
ಆವ ವಿಷ್ಣುನೆ ಸರ್ವ ವಿಶ್ವಾದಿ ಮೂರುತಿ
ಆವ ವಿಷ್ಣುನೆ ಅನಂತಾವತಾರ ಮೂರುತಿ
ಆವ ವಿಷ್ಣುನೆ ಜೀವದ ಪ್ರತಿಪಾದ್ಯಮೂರುತಿ
ಆವ ವಿಷ್ಣುವಿನಾಧೀನವಾಗದ ತಾವಿಲ್ಲ
ಎಲ್ಲನೋಡಾ
ಆವ ವಿಷ್ಣು ಸರ್ವಜ್ಞ, ಸಾಕಾರ ಜ್ಞಾನಾನಂದ
ಯಾವತ್ತು ಏಕನೇವಾದೇವಾ
ಶ್ರೀವಿಷ್ಣು ನಮ್ಮ ಸ್ವಾಮಿಗೋಪಾಲ ವಿಠಲ
ಪಾವನ ಮೂರುತಿ ಪರಮ ಪುರುಷ ನೋಡು ॥

ಶ್ರೀಹರಿ ದೋಷದೂರ, ಸುಖಪೂರ್ಣ, ಬಲಪೂರ್ಣ, ಜನನ ಮರಣರಹಿತ ಎಂಬ ನಂಬಿಕೆಯನ್ನು ಹೇಳುವ ಸಾಲುಗಳಿವು; ನಿನ್ನ ಜ್ಞಾನವಂತನೆಂದು ಇನ್ನು ಜ್ಞಾನ ಸಂಪಾದಿಸುವೆ। ನಿನ್ನ ದೋಷದೂರನೆಂದು ದೂಷಣಂಗಳಟ್ಟುವೆ। ನಿನ್ನ ಗುಣಪೂರ್ಣನೆಂದು ಗುಣವಂತನಾಗುವೆ। ನಿನ್ನ ಸುಖಪೂರ್ಣನೆಂದು ಸಂತೋಷದಿಂದಲಿರುವೆ। ನಿನ್ನ ಬಲಪೂರ್ಣನೆಂದು ಬಲವಂತನಾಗುವೆ। ನಿನ್ನ ಜನನ ಮರಣರಹಿತನೆಂತೆಂದು ಕೊಂಡಾಡಿ, ಮುನ್ನ ಧರೆಯಮೇಲೆ ಎನ್ನ ಜನನ ಕಳೆವೆ......

ಜೀವ ಸ್ವತಂತ್ರವಲ್ಲ, ದೇವ ಮಾತ್ರ ಸರ್ವಸ್ವತಂತ್ರ ಜೀವಿಗಳನ್ನು ನಡೆಸುವವನು ಹರಿಯೇ. ಬಿಂಬ ಚಲಿಸಿದರೆ ಪ್ರತಿಬಿಂಬ ಚಲಿಸುತ್ತದೆ:

ಆವಲೀಲೆಯೊ ನಿನ್ನದಾವ ಸ್ವಭಾವವೊ
ಜೀವರೊಡನೆ ಆಟ ಆವಸುಖವೊ ನಿನಗೆ
ನಾವಸ್ವತಂತ್ರರು ನೀ ಸರ್ವಸ್ವತಂತ್ರ
ಬಾಹುವುದೆವ್ಮಿಂದ ಏನು ನಿನಗೆ ದೇವ
ನಾವು ಊಳಿಗರು ನಿನಗೆ ಬೇರೆ ವೆಂಬವೇನೊ
ನೀ ಊಳಿಗನಾಗಿ ಮಾಡಿಸಿ ನಮ್ಮಿಂದ
ಜೀವರಿಗೆ
ಫಲವನು ತಂದು ತಂದುಣಿವೆ ॥

ಇದಲ್ಲದೆ ಜಗತ್ತು ಸತ್ಯ, ಚೇತನ, ಅಚೇತನ ಮತ್ತು ಈಶ್ವರರಿಗಿರುವ ಭೇಧ ಸತ್ಯ. ಜೀವರು ಪರಸ್ಪರ ಬೇಧ ಉಳ್ಳವರು; ಜೀವಿಗೆ ಆಗುವ ಸ್ವರೂಪ ಆನಂದದ ಅಭಿವ್ಯಕ್ತಿಯೇ ಮುಕ್ತಿ. ಮುಕ್ತಿಗೆ ಸಾಧನ ಭಕ್ತಿ ಎಂಬ ಮುಖ್ಯ ತತ್ತ್ವಗಳನ್ನು ಹೇಳುವ ಸುಳಾದಿಗಳೂ ಈ ದಾಸರಲ್ಲಿದೆ.

ಶ್ರೀಹರಿಯ ಪತ್ನಿಯಾದ ಲಕ್ಷ್ಮಿಯ ಉಪಾಸನೆ ಮಾಡದ ದಾಸರಿಲ್ಲ. ಏಕೆಂದರೆ ಕ್ಷರಾಕ್ಷರದಲ್ಲಿ ವ್ಯಾಪ್ತಳಾದ ಲಕ್ಷ್ಮಿ ಪ್ರಕೃತಿ ನಿಯಾಮಕಳು, ಬ್ರಹ್ಮ ಮೊದಲಾದ ಇಂದ್ರಿಯಾಭಿಮಾನಿದೇವತೆಗಳ, ಇಂದ್ರಿಯಗಳ, ಪಂಚಮಹಾಭೂತಗಳ ಮತ್ತು ಸಕಲತತ್ತ್ವೇಶರುಳ ಸೃಷ್ಟಿಯೂ ಅವಳಿಂದಲೇ.

ಹರಿಯಾಜ್ಞೆಯಿಂದಲಿ, ಜಡಪ್ರಕೃತಿ ದೆಸೆಯಿಂದ
ಪರತ್ರಿಗುಣಾತ್ಮಕವಾದಂಥ ಮಹತತ್ತ್ವ ಆ
ದರಿಂದ ವೈಕಾರಿಕ ತೈಜಸ ತಾಮಸವನ್ನು
ಭರಿತವಾದಂಥ ಅಹಂಕಾರತತ್ತ್ವ, ಪರಿಪರಿ
ಸೃಷ್ಟಿಸಿದೆ
ಮಹತತ್ತ್ವ ದೆಸೆಯಿಂದ ಬೊಮ್ಮನ ಸೃಷ್ಟಿಸಿದೆ
ಅಹಂಕಾರ ವೈಕಾರಿಕದಿಂದ ಮನಸ್ಸು ಆ
ಮಹ ಇಂದ್ರಿಯಗಳಿಗಭಿಮಾನಿ ದೇವತೆಗಳನು
ಅಹಂಕಾರ ಪಂಚತನ್ಮಾತ್ರೆಯನ್ನು ಸೃಷ್ಟಿಸಿದೆ
ಅಹಂಕಾರ ತೈಜಸದಿಂದ ಚಕ್ಷುರಾದಿ
ಇಹ ಇಂದ್ರಿಯಗಳನ್ನೆಲ್ಲ ಸೃಷ್ಟಿಸಿವೆ
ಅಹಂಕಾರ ತಾಮಸದಿಂದಲಿ ಪಂಚ
ಮಹಾಭೂತಂಗಳ ಸೃಷ್ಟಿಸಿದೆ, ಮೋಹದಿಂದ
ಸಕಲ ತತ್ತ್ವೇಶರ ಸೃಷ್ಟಿಸಿವೆ
ಆ ಹರಿ ಕರುಣಾಪೂರ್ಣ ಕಟಾಕ್ಷದಿ ಈ
ಮಹಾ ಜಗಕೆಲ್ಲ ಪ್ರೇಮದಿಂದ ಸಲಹುವೆ ॥

ಇದಲ್ಲದೆ ದ್ವೈತಮತವನ್ನು ಖಂಡಿಸಿದವರನ್ನು ಖಂಡಿಸಿರುವ ಒಂದೆರಡು ಸುಳಾದಿಗಳು ಗೋಪಾಲದಾಸರಲ್ಲಿದೆ. ಹರಿಸಾಕಾರ, ಸಗುಣ, ಸರ್ವೋತ್ತಮ ಇತ್ಯಾದಿ ದ್ವೈತತತ್ತ್ವಗಳನ್ನು ಖಂಡಿಸಿದವರನ್ನು ಕುರಿತು – "ಸಾಕಾರ ಹರಿಗೆ ನಿರಾಕಾರ ನೆಂಬಿ ನೀನು, ಯಾಕೊ ಕುವಾದಿ ಗರುವತನವು ಏನೊ ? ಏಕವಾಗಿ ಸುರರು (ಅ) ಸುರರು ಕೊಂ

(16 ನೇ ಪುಟ ನೋಡಿ)

# ಸತ್ಯವೇ ಧರ್ಮ

ಶ್ರೀ ಡಿ. ಕೃಷ್ಣೈಂಗಾರ್

“ಸತ್ಯಮೇವ ಜಯತೇ ನಾನೃತಂ” ·ಸತ್ಯಂವದ ಧರ್ಮಂ ಚರ' ಸತ್ಯ ಎಂದರೆ ಸ್ವರ್ಗ– ಅಸತ್ಯ ಎಂದರೆ ನರಕ ಹಿಂಸೆಯೇ ನರಕ. ಅಹಿಂಸೆಯೇ ಸ್ವರ್ಗ, ದಯೆ ಎಂದರೆ ಸ್ವರ್ಗ. ದ್ವೇಷ ಎಂದರೆ ನರಕ.

ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ. ದಯೆಯೇ ಧರ್ಮದ ಮೂಲ ವಯ್ಯಾ– ಇಂತಹ ಮಾತುಗಳು ನಮ್ಮ ಪುರಾಣ ಇತಿಹಾಸಗಳಲ್ಲಿ ನಿರೂಪಿತವಾಗಿವೆ. ಭಾರತೀಯ ಸಾಧುಸಂತರು ಈ ಮಾತುಗಳ ಅರ್ಥವನ್ನು ವಿವರಿಸಿ, ಮಾನವರು ನೀತಿವಂತರೂ, ಗುಣವಂತರೂ ಆಗಬೇಕೆಂದು ಎಚ್ಚರಿಸಿದ್ದಾರೆ. ಇದರಿಂದ ಅವರ ಜೀವನವು ಹಸನಾಗವುದೆಂದೂ. ಅವರ ಸಮಾಜವು ಸ್ವಚ್ಛವಾಗುವುದೆಂದೂ ತಿಳಿಸಿದ್ದಾರೆ.

ನಮ್ಮ ಇತಿಹಾಸಗಳಲ್ಲಿ ಬರುವ ಇಂತಹ ಕಥಾಸಂದರ್ಭಗಳಲ್ಲಿ ಒಂದು ಹೀಗಿದೆ. ಇದು ರಾಮಾಯಣದಲ್ಲಿ ಬರುತ್ತದೆ. ಶ್ರೀರಾಮನು ಪಿತೃವಾಕ್ಯಪರಿಪಾಲನಕ್ಕಾಗಿ ಕಾಡಿಗೆ ಹೋಗುವನು. ಭರತನು ಆಗ ಅಯೋಧ್ಯೆಯಲ್ಲಿ ಇರಲಿಲ್ಲ. ಬಂದನಂತರ ಸೂರ್ಯವಂಶದಲ್ಲಿ ಹಿರಿಯವನೇ ರಾಜ್ಯಭಾರ ಮಾಡಬೇಕೆಂದು ಶ್ರೀರಾಮನನ್ನು ಕರೆತರಲು ಚಿತ್ರಕೂಟಕ್ಕೆ ಬಂದು ರಾಮನನ್ನು ಪ್ರಾರ್ಥಿಸುವನು. ಆಗ ಶ್ರೀರಾಮನು ದಶರಥ ಮಹಾರಾಜನ ಸತ್ಯ ವಾಕ್ಯಗಳನ್ನು ತಾವುಗಳಿಬ್ಬರೂ ಪಾಲಿಸುವುದು ಧರ್ಮವೆಂದೂ. ತನ್ನಂತೆ ಭರತನೂ,ತಂದೆಯ ಅಪ್ಪಣೆಯನ್ನು ಪಾಲಿಸಬೇಕೆಂದೂ ಯುಕ್ತಿ ಯುಕ್ತವಾದ ವಾದಗಳಿಂದ ಭರತನನ್ನು ಸಮಾಧಾನ ಪಡಿಸುವನು. ಆಗ ಜಾಬಾಲಿ ಎಂಬ ಮುನಿಯು ಭರತನ ಪಕ್ಷವನ್ನು ವಹಿಸಿ, ಶ್ರೀರಾಮನನ್ನು ಹೇಗಾದರೂ ಮಾಡಿ ಅಯೋಧ್ಯೆಗೆ ಹಿಂತಿರುಗುವಂತೆ ಮಾಡಬೇಕೆಂದು ಕೆಲವು ಧರ್ಮ ವಿರುದ್ಧ ಮಾತುಗಳನ್ನು ಹೇಳಿದನು.

“ರಾಮಾ! ತಂದೆಯಾರು? ತಾಯಿಯಾರು? ಬಂಧು ಬಳಗಯಾರು? ಸಂತೆಗೆ ಜನರು ಸೇರಿ ಸಾಯಂಕಾಲಕ್ಕೆ ಹೊರಟು ಹೋಗುವಂತೆ, ಮಾನವನು ಒಬ್ಬನೇ ಹುಟ್ಟಿ, ಒಬ್ಬನೇ ಸಾಯುವನು ಕೆಲವು ಕಾಲ ಮಾತ್ರ ಇರುವನು. ತಂದೆ ಬಿಟ್ಟ ರಾಜ್ಯವನ್ನು ನೀನೇ ವಹಿಸಿಕೊಂಡು, ಭರತನ ಪ್ರಾರ್ಥನೆಯನ್ನು ಅಂಗೀಕರಿಸು” ಎಂದು ಮುನಿಯು ಹೇಳಿದನು.

ಆಗ ಶ್ರೀರಾಮನು ಮುನಿಯ ವಾಕ್ಯಗಳಿಗೆ ಉತ್ತರವಾಗಿ. ಲೋಕದ ಸಮಸ್ತ ಜನರಿಗೂ ಅನ್ವಯವಾಗುವಂತಹ ಮಾತುಗಳನ್ನು ಹೇಳುವನು.

“ಎಲೈ ಮುನಿಯೇ ಸತ್ಯ, ಧರ್ಮಗಳೆರಡೂ ಪುರಾತನವಾದ ರಾಜಧರ್ಮಗಳು. ರಾಜ್ಯವು ಸತ್ಯದಲ್ಲಿದೆ. ಲೋಕವು ಸತ್ಯದಲ್ಲಿದೆ. ದೇವತೆಗಳಿಗೂ, ಮುನಿಗಳಿಗೂ ಸತ್ಯವೇ ಸ್ವಧರ್ಮ. ಸತ್ಯವಾದಿಗಳಿಗೆ ಯಾವಾಗಲೂ ಒಳ್ಳೆಯದಾಗುವುದು. ಸತ್ಯವೇ ಪರದೈವ ಎಂದು ಅವರು ಭಾವಿಸುವರು. ಸಮಸ್ತಕ್ಕೂ ಸತ್ಯವೇ ಮೂಲ ಧರ್ಮ, ಯಜ್ಞ, ತಪಸ್ಸು, ಧಾನ, ವೇದ – ಎಲ್ಲವೂ ಸತ್ಯದಲ್ಲಿದೆ.

ಎಲೈ, ಮುನಿಯೇ! ಸತ್ಯದಿಂದ ಲೋಕವನ್ನಾಳಬಹುದು. ಕುಲದ ಕೀರ್ತಿಯನ್ನು ಹೆಚ್ಚಿಸಬಹುದು. ಸ್ವಧರ್ಮವನ್ನು ಬೇಕಾದರೂ ಪಡೆಯಬಹುದು. ಹೀಗಿರುವಾಗ ತಂದೆಯ ಸತ್ಯವಾಕ್ಯವನ್ನು ನಾವು ಪಾಲಿಸಬೇಡವೇ? ಸತ್ಯದ ಕಟ್ಟನ್ನು ಯಾವಾಗಲೂ ಮುರಿಯಬಾರದು ಸತ್ಯಕ್ಕಾಗಿ ಅಲ್ಲವೇ ಮಹರ್ಷಿಗಳು ಬಹುಕಾಲ ತಪಸ್ಸುಮಾಡಿದುದು. ಸತ್ಯ, ಧರ್ಮ ಇವೆರಡೂ ಆತ್ಮಗುಣ. ಕ್ಷತ್ರಿಯರಲ್ಲಿರುವ ಧರ್ಮ ಅತಿಸ್ವಲ್ಪ ಅಧರ್ಮವೇ ಅವರಲ್ಲಿ ಹೆಚ್ಚು. ರಾಜ್ಯದಾಶೆಯಿಂದ ಅನೇಕ ಅಧರ್ಮ ಮಾಡುವರು. ನಾನು ಖಂಡಿತ ಹಾಗೆ ಮಾಡಲಾರೆ.

ಲೋಕದಲ್ಲಿ ಮಾನವನು ಪಾಪಕಾರ್ಯ ಮಾಡುವುದಾಗಿ ನಿಶ್ಚಯ ಮಾಡುವನು. ಆಮೇಲೆ ಕೈಯಿಂದ ಮಾಡುವನು. ಸುಳ್ಳು ಹೇಳುವನು. ಹೀಗೆ ತ್ರಿಕರಣಪೂರ್ವಕವಾಗಿ ಪಾಪಕಾರ್ಯದಲ್ಲಿ ಪ್ರವರ್ತಿಸುವನು. ವಿವೇಕಿಯಾದವನು ಹಾಗೆ ಮಾಡುವುದಿಲ್ಲ. ತ್ರಿಕರಣಶುದ್ಧಿಯಿಂದ ಯಾವಾಗಲೂ ಸತ್ಯವನ್ನು ಬಿಡಬಾರದು. ತಂದೆಯ ಮಾತನ್ನು ಉಲ್ಲಂಘಿಸುವುದಿಲ್ಲ ಎಂದು ಕೈಕೇಯಿಗೆ ಹೇಳಿ ಪ್ರತಿಜ್ಞೆ ಮಾಡಿ ಕಾಡಿಗೆ ಬಂದಿದ್ದೇನೆ. ಅದನ್ನು ಕೇಳಿ ಅವಳಿಗೆ ಸಂತೋಷವಾಗಿದೆ. ಈಗ ನಾನು ಅದನ್ನು ಪಾಲಿಸಬೇಡವೇ? ಇದರಿಂದ ಪಿತೃಗಳಿಗೂ ದೇವತೆಗಳಿಗೂ, ಸಂತೋಷವಾಗುವುದು.

“ಎಲೈ ಜಾಬಾಲಿಮುನಿಯೇ, ಸತ್ಯ, ಧರ್ಮ, ಭೂತದಯೆ, ಪಿತೃವಾಕ್ಯ ಪರಿಪಾಲನೆ, ಪೂಜೆ, ಅತಿಥಿಸತ್ಕಾರ ಇವೆಲ್ಲ ಪುಣ್ಯಕಾರ್ಯಗಳು. ಇವುಗಳಿಂದ ಸ್ವರ್ಗಪ್ರಾಪ್ತಿ” ಎಂದು ಹಿರಿಯರು ಹೇಳಿರುವರು.

“ಹೇ! ಮುನಿಯೇ ನಿನಗೇಕೆ ಈ ಕೆಟ್ಟ ಬುದ್ಧಿ ಹುಟ್ಟಿತು. ಆಸ್ತಿಕರ ವೇಷದಲ್ಲಿ ನಾಸ್ತಿಕನಂತೆ ವರ್ತಿಸುತ್ತಿರುವೆ. ಸತ್ಯ, ಧರ್ಮ, ಅಹಿಂಸೆ, ಶುಚಿತ್ವ – ಮುಂತಾದ ಸದ್ಗುಣಗಳಿಂದ ಭರತ ಋಷಿಪೂಜ್ಯನಾಗಲಿಲ್ಲವೇ?” ಎಂದು ಹೇಳಿ ಶ್ರೀರಾಮನು ಕೋಪಗೊಂಡನು.

ಆಗ ವಸಿಷ್ಠಾದಿ ಹಿರಿಯರು. ಜಾಬಾಲಿ ಮುನಿಯು ನಾಸ್ತಿಕನಲ್ಲವೆಂದೂ, ಶ್ರೀರಾಮನು ಅಯೋಧ್ಯೆಗೆ ಹಿಂತಿರುವಂತೆ ಮಾಡಿದ ಉಪಾಯ ಇದೆಂದೂ ಹೇಳಿ ಶ್ರೀರಾಮನನ್ನು ಸಮಾಧಾನ ಪಡಿಸಿದರು.

ಅನಂತರ ಶ್ರೀರಾಮನು,“ಆಚಾರ್ಯ! ತಂದೆ ತಾಯಿಗಳು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವೇ ಇಲ್ಲ. ಅವರು ಮಗನ ದೇಹದ ಉತ್ಪತ್ತಿಗೆ ಕಾರಣರು. ದೇಹವು ಸತ್ಯಸಮಾರ್ಜನೆಗೆ ಕಾರಣ ದಶರಥ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು. ಸೋಮ, ಮಂಗಳ. ಬುಧ. ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 200=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ (ಒಂದು ವರ್ಷಕ್ಕೆ) | ರೂ – 42=00 |
| ಶಾಶ್ವತ ನಿತ್ಯಾರ್ಚನೆ | ರೂ – 542=00 |

ಮಹಾರಾಜನು ನನ್ನ ದೇಹದ ಉತ್ಪತ್ತಿಗೆ ಕಾರಣನು. ನಾನು ಅವನಿಗೆ ಕೊಟ್ಟ ಮಾತನ್ನು ನಡೆಸಬೇಡವೇ? ಇದರಿಂದ ನಾನು ಸತ್ಯವನ್ನು ಪಾಲಿಸಿದಂತಾಗುವುದು. ಇದು ನನ್ನ ಪ್ರಥಮ ಕರ್ತವ್ಯ. ಆದುದರಿಂದ ಭರತನ ಪ್ರಾರ್ಥನೆಯನ್ನು ಅಂಗೀಕರಿಸಲಾಗುವುದಿಲ್ಲ. ಅದು ಸತ್ಯಧರ್ಮಗಳಿಗೆ ದೂರ ಆದುದರಿಂದ ನಾನು ಅಯೋಧ್ಯೆಗೆ ಹಿಂತಿರುಗಿ ರಾಜ್ಯಭಾರ ವಹಿಸಿಕೊಳ್ಳುವುದಿಲ್ಲ" ಎಂದು ನಿರ್ಧಾರಮಾಡಿದ್ದೇನೆ ಎಂದನು.

ಆಮೇಲೆ ವಸಿಷ್ಠಾದಿಗಳು 'ಶ್ರೀರಾಮನು ಸತ್ಯಸಂಧನು, ಧರ್ಮಜ್ಞನು. ಅವನ ಮನಸ್ಸೆಲ್ಲ ಸತ್ಯಧರ್ಮದಲ್ಲಿ ನೆಲಸಿದೆ. ಅವನನ್ನು ಅಯೋಧ್ಯೆಗೆ ಹಿಂತಿರುಗಿಸುವುದು ಸಾಧ್ಯವಿಲ್ಲ' ಎಂದು ನಿಶ್ಚಯಮಾಡಿದರು. ಭರತನನ್ನೂ ಸಮಾಧಾನಪಡಿಸಿ, ಶ್ರೀರಾಮನ ಪಾದುಕೆಗಳನ್ನು ಭರತನಿಗೆ ಕೊಡಿಸಿ, ಪಾದುಕೆಗಳ ಹೆಸರಿನಲ್ಲಿ ಶ್ರೀರಾಮನು ಹಿಂತಿರುಗುವವರೆಗೆ ರಾಜ್ಯಭಾರ ನಡೆಸುತ್ತಿರಬೇಕೆಂದು ಸೂಚಿಸಿದರು.

ಹೀಗೆ ಶ್ರೀರಾಮನು ಸತ್ಯಧರ್ಮಗಳ ಮಹಿಮೆಯನ್ನು ಜಗತ್ತಿಗೆ ತೋರಿಸಿ ಮಾರ್ಗದರ್ಶಿಯಾಗಿದ್ದಾನೆ.



( 14ನೇ ಪುಟದಿಂದ)

ಡಾಡಿ (ಕೂಡಿ)ಕೊಂಡು ಇನ್ನು, ಆ ಕಲಶವಮೃತ ನೀ ಕುಡಿ. ತಾಕುಡೆಂಬೊ ಆ ಕಾಲದಲ್ಲಿನ್ನು ಸ್ತ್ರೀಯಾಕಾರವಾಗೆ ಹರಿ ಆಕಾರಕ್ಕಸುರರು ಮೋಹಕರಾಗಲಿಲ್ಲವೆ? ಸಾಕಲ್ಯ ಗುಣನಿಗೆ ನಾಲ್ಕೆರಡು ಗುಣವೆಂಬ ಯಾಕೆ ನಿನ್ನದು .ಇಂಥ ಪೋಕತನವು ಬಿಡೆ ಲೋಕದೊಳಗಿದ್ದಂಥ ನಾನಾ ಕುಪದಾರ್ಥದಿ, ಆಕಾರ ಹರಿಗುಣ ನೀ ಕೇಳೊ ಮೂರ್ಖಜೀವ" ಎಂದಿದ್ದಾರೆ. ಸಾಕಲ್ಯ ನಿರ್ದೋಷನಗೆ ವಿರೋಧ ಕಲ್ಪಿಸಿರುವುದನ್ನೂ, ಅಪ್ರಾಕೃತನಾದ ಹರಿಯನ್ನು ಪ್ರಾಕೃತ ಎಂದವರನ್ನೂ ಖಂಡಿಸಲಾಗಿದೆ.

ಒಟ್ಟಿನಲ್ಲಿ, ಗೋಪಾಲದಾಸರು ಕಠಿಣವಾದ ತತ್ತ್ವಗಳನ್ನು ನಿರೂಪಿಸುವಾಗಲೂ ಸಾಮಾನ್ಯವಾದ ಸರಳ ಭಾಷೆಯನ್ನು ಬಳಸಿದ್ದಾರೆ. ಎಷ್ಟೋಕಡೆ ಭಾವನೆಗಳ ಪ್ರವಾಹವನ್ನು ಏಕಾಗ್ರವಾಗಿ ಹರಿಯ ಬಿಟ್ಟಿರುವ ರೀತಿ ಆಕರ್ಷಕವಾಗಿದೆ.



ಧಾರಾವಾಹಿ

# ಭಾರತೀಯ ಪರಮಾರ್ಥ

ಪ್ರಪಂಚದಲ್ಲಿರುವುದೆಲ್ಲವನ್ನೂ ವೇದಾಂತಿಗಳು ಮೂರಾಗಿ ವಿಭಾಗಿಸುವರು. ಅವೇ ಅಚಿತ್ತು ಚಿತ್ತು ಮತ್ತು ಈಶ್ವರ (Matter, Souls and God)

ಜ್ಞಾನಶೂನ್ಯವಾಗಿ ಪ್ರಕೃತಿ ಪರಿಣಾಮಗಳಾದ ಪಂಚಭೂತಗಳು, ಪ್ರಾಣಿಗಳ ಶರೀರೇಂದ್ರಿಯಗಳು– ಇವೆಲ್ಲವೂ ಅಚಿತ್ವರ್ಗಕ್ಕೆ ಸೇರಿದವುಗಳು. ಇದರ ವಿಷಯವಾಗಿ ಸಂಗ್ರಹವಾಗಿ ಹಿಂದೆ ವಿವರಿಸಿರುವೆವು. ಮಾನವರ ಮತ್ತು ಇತರ ಪ್ರಾಣಿಗಳ ಶರೀರದಲ್ಲಿ ಜ್ಞಾನಸ್ವರೂಪವಾಗಿ ಅವರ ಹೃದಯದಲ್ಲಿ ವಾಸಿಸುತ್ತಿರುವವರೇ ಚಿತ್ತೆಂಬ, ಜೀವಾತ್ಮರು. ಈ ಚಿತ್ತು ಅಚಿತ್ತುಗಳನ್ನು ಪ್ರಪಂಚರೂಪವಾಗಿ ಸೃಷ್ಟಿಸಿ ಅವುಗಳನ್ನು ಪಾಲಿಸುತ್ತಿರುವವನೇ ಏಕೈಕ ಈಶ್ವರ. ಈ ಪ್ರಪಂಚದಲ್ಲಿರುವುದೆಲ್ಲವೂ ಈ ಮೂರೇ "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ" (ಶ್ವೇ. 1-12) ಎಂದು ಶ್ರುತಿಯಲ್ಲಿ ಹೇಳಿರುವುದು. ಭೋಕ್ತಾ–ಎಂದರೆ ಕರ್ಮಫಲವನ್ನು ಅನುಭವಿಸುವ ಜೀವಾತ್ಮರು, ಭೋಗ್ಯಂ – ಎಂದರೆ ಆ ಜೀವಾತ್ಮರುಗಳಿಗೆ ಭೋಗೋಪಕರಣರೂಪವಾಗಿರುವ ಪ್ರಕೃತಿ ಮತ್ತು ಪ್ರಾಕೃತ ವಿಷಯಗಳು, ಪ್ರೇರಿತಾರಂ– ಎಂದರೆ ಇವೆರಡರ ಸ್ಥಿತಿಗತಿಗಳನ್ನು ಪ್ರೇರೇಪಿಸುವ ಈಶ್ವರ ಎಂದು. ಪ್ರಪಂಚದಲ್ಲಿರುವ ತತ್ತ್ವವೆಲ್ಲವೂ ಮೂರೇ.

ಈ ಜೀವಾತ್ಮರು ಒಂದೊಂದು ಶರೀರದಲ್ಲೂ ಒಬ್ಬೊಬ್ಬರಂತೆ ಇದ್ದು ಅಸಂಖ್ಯಾತರಾಗಿರುವರು. ಒಂದು ಗುಂಪಿನಲ್ಲಿರುವವರನ್ನು ಕುರಿತು ನಿಮ್ಮಲ್ಲಿ ರಾಮನೆಂಬುವನು ಯಾರು? ಎಂದು ಕೂಗಿ ಕೇಳಿದರೆ ರಾಮನಾಮಕನಾದವನೊಬ್ಬನು ಮುಂದೆ ಬಂದು 'ನಾನು' ಎಂದು ಹೇಳಿಕೊಳ್ಳುವನು. ಆ ಹೆಸರು ಆ ಶರೀರಕ್ಕೆ ಅನ್ವಯಿಸುವುದರ ಜೊತೆಗೆ ಅವನ ಆತ್ಮಕ್ಕೂ ಅನ್ವಯಿಸುವುದು. ಆ ಮನುಷ್ಯನು ಸತ್ತುಹೋದರೆ ಆ ಶರೀರದ ಎದುರಿಗೆ ನಿಂತು ರಾಮಾ! ಎಂದು ಕರೆದರೆ ಆಗ ಅದು ಓಗೊಡುವುದಿಲ್ಲ. ಅದಕ್ಕೆ ಕಾರಣ ಒಳಗಿದ್ದ ಜೀವಾತ್ಮನು ಈಗ ಆ ಶರೀರವನ್ನು ತ್ಯಜಿಸಿ ಹೋಗಿರುವುದು. ಇದರಿಂದ ಮೊದಲು ಕೂಗಿದ ಕರೆಯನ್ನು ಅರಿತು ಉತ್ತರಿಸಿದ ವಸ್ತುವೇ ಜ್ಞಾನಸ್ವರೂಪನಾದ ಜೀವಾತ್ಮ. ಅದರಿಂದಲೇ ಜೀವಾತ್ಮನನ್ನು ಜ್ಞಾನಸ್ವರೂಪನೆನ್ನುವರು.

ಒಂದು ಹಸುವಿನ ಮುಂದೆ ಒಂದು ಕೋಲನ್ನು ಹಿಡಿದುಕೊಂಡು ಹೊಡೆಯುವಂತೆ ನಟಿಸಿದಾಗ

ಅದನ್ನು ಅದರೊಳಗಿರುವ ಆತ್ಮವು ಅರಿತು ಹೆದರಿ ದೂರ ಸರಿಯುವುದು. ಅದೇ ಹಸು ಸತ್ತು ಬಿದ್ದಿರುವಾಗ ಅದಕ್ಕೆ ಏನೂ ತಿಳಿಯುವುದಿಲ್ಲ. ಜೀವಾತ್ಮನು ಜ್ಞಾನಸ್ವರೂಪನೆನ್ನುವುದಕ್ಕೆ ಇದೂ ಒಂದು ಉದಾಹರಣೆ

ಕಣ್ಣಿಗೆ ಕಾಣಿಸದಿರುವ ಈ ಜೀವಾತ್ಮನ ವಿಷಯದಲ್ಲಿ ಇನ್ನೂ ಹೆಚ್ಚಿನ ವಿಷಯವನ್ನು ತಿಳಿಯಬೇಕಾದರೆ ಅದನ್ನು ವೇದಾಂತಾದಿ ಶಾಸ್ತ್ರಗಳಿಂದಲೇ ಅರಿಯಬೇಕು. ಶಾಸ್ತ್ರಗಳು ಈ ರೀತಿಯಾಗಿ ಹೇಳುವುವು

ಆತ್ಮಸ್ವರೂಪವು ದೇಹೇಂದ್ರಿಯ ಮನಃ ಪ್ರಾಣ ಬುದ್ಧಿ ಇವೆಲ್ಲವುಗಳಿಗಿಂತಲೂ 1. ವಿಲಕ್ಷಣವಾಗಿಯೂ, 2 ಅಜಡವಾಗಿಯೂ, 3. ಆನಂದಸ್ವರೂಪನಾಗಿಯೂ, 4 ಅಣುವಾಗಿಯೂ 5. ಅವ್ಯಕ್ತನಾಗಿಯೂ, 6 ಅಚಿಂತ್ಯನಾಗಿಯೂ 7. ನಿರವಯವನಾಗಿಯೂ 8 ನಿರ್ವಿಕಾರನಾಗಿಯೂ, 9. ಜ್ಞಾನಾಶ್ರಯನಾಗಿಯೂ,

ಗುವುದು. ಅದೇ ರೀತಿ ಕೈಗಳಿಲ್ಲದೆ, ಕಾಲುಗಳಿಲ್ಲದೆ. ಕಿವುಡರು, ಮೂಕರು ಜೀವಿಸಿರುವುದನ್ನು ಕಂಡಿರುವೆವು.

ಆದರಿಂದ ಇಂದ್ರಿಯಗಳು ಜೀವಾತ್ಮವಲ್ಲ. ಇಂದ್ರಿಯಗಳೇ ಜೀವಾತ್ಮವಾಗಿದ್ದರೆ 'ನಾನೇ ಇಂದ್ರಿಯ' ಎಂದು ಹೇಳಿಕೊಳ್ಳಬೇಕು. ಆದರೆ ವ್ಯವಹಾರದಲ್ಲಿ ನನ ಕಣ್ಣು, ನನ ಕೈ, ನನ್ನ ಕಾಲು, ನನ್ನ ಹೊಟ್ಟೆ ಇತ್ಯಾದಿಯಾಗಿ ಈ ಕೈ ಕಾಲು ಇತ್ಯಾದಿ ಅವಯವಗಳೂ, ಇಂದ್ರಿಯಗಳೂ 'ನಾನು' ಎಂಬ ತನಗಿಂತಲೂ ಬೇರೆಯಾದ ಒಬ್ಬನಿಗೇ ಸೇರಿರುವಂತೆ ವ್ಯವಹಾರದಲ್ಲಿ ಕಾಣುವೆವು. ಅದೇರೀತಿ ನನ್ನ ಮನಸ್ಸು, ನನ್ನ ಬುದ್ಧಿ, ನನ ಪ್ರಾಣ ಎಂದು ಇಂದ್ರಿಯಗಳಂತೆ ಮನಸ್ಸು ಬುದ್ಧಿ ಪ್ರಾಣಗಳೂ ಆ ಬೇರೊಬ್ಬನಿಗೇ ಸೇರಿದವುಗಳು. ಅವನೇ ಜೀವಾತ್ಮ. ಅದರಿಂದಲೇ ಜೀವಾತ್ಮನು ಅವೆಲ್ಲವುಗಳಿಗಿಂತಲೂ ಬೇರೆಯಾಗಿ ವಿಲಕ್ಷಣನಾಗಿರುವುದು ಅರಿವಾಗುವುದು, ಇವೆಲ್ಲವೂ ಆತ್ಮನಿಗೆ ಸೇರಿದವುಗಳು. ಶರೀರವೆಲ್ಲವೂ ಜೀವಾತ್ಮನ ಸ್ವತ್ತು.

# ಜೀವಾತ್ಮರು ಮತ್ತು ಈಶ್ವರ

10. ಈಶ್ವರನಿಯಾಮ್ಯನಾಗಿಯೂ, 11 ಧಾರ್ಯನಾಗಿಯೂ, 13 ಶೇಷಿಯಾಗಿಯೂ ಇರುವನು. ಇವುಗಳ ಅರ್ಥವನ್ನು ಸ್ವಲ್ಪ ವಿಮರ್ಶಿಸೋಣ.

1. ದೇಹದೊಳಗಿರುವ ಆತ್ಮನು ದೇಹದೊಳಗಿರುವ ಅವಯವಗಳಲ್ಲ, ಇಂದ್ರಿಯಗಳಲ್ಲ, ಮನಸ್ಸಲ್ಲ, ಬುದ್ಧಿಯಲ್ಲ, ಪ್ರಾಣನಲ್ಲ ಇವೆಲ್ಲವುಗಳಿಗಿಂತಲೂ ಬೇರೆಯಾಗಿ ವಿಲಕ್ಷಣನಾಗಿರುವನು. 'ವಿಲಕ್ಷಣ' ನೆಂದರೆ ದೇಹದ ಲಕ್ಷಣಗಳು ಯಾವುವೂ ಅವನಲ್ಲಿಲ್ಲ. ಅವನ ಲಕ್ಷಣಗಳೇ ಬೇರೆ ಎಂದು ಅರ್ಥ. ದೇಹವು ಇಂದ್ರಿಯಗಳ ಸಮೂಹ. ಇವುಗಳಲ್ಲಿ ಯಾವುದಾದರೂ ಒಂದು ಅವಯವವು ಆತ್ಮವಾಗಿರಬಹುದೋ ಎಂದು ಶಂಕಿಸಬಹುದು. ಉದಾಹರಣೆಗೆ ಕಣ್ಣೇ ಆತ್ಮವೆಂದರೆ–ಆಗ ಒಂದೋ ಅಥವಾ ಎರಡೋ ಕಣ್ಣು ಹೋದರೆ ಆ ಮನುಷ್ಯನು ಸತ್ತುಹೋಗಬೇಕು. ಕಣ್ಣಿಲ್ಲದ ಕುರುಡರು ಜೀವಿಸಿರುವುದನ್ನು ಕಂಡಿರುವೆವು. ಅದರಿಂದ ಕಣ್ಣು ಆತ್ಮವಲ್ಲವೆಂಬ ಅರಿವಾ

ಶ್ರೀ ಎಂ.ಓ.ಎಸ್. ಅಯ್ಯಂಗಾರ್

"ಅತ್ರ ಶುದ್ಧೋಽಕ್ಷರಃ ಪ್ರಕೃತೇಃ ಪರಃ" ಎಂದರೆ ಆತ್ಮನು ಶುದ್ಧನು, ಶಾಶ್ವತನು, ಪ್ರಾಕೃತವಾದ ಇಂದ್ರಿಯ, ಮನಸ್ಸು, ಪ್ರಾಣ, ಶರೀರ ಇವುಗಳಿಗಿಂತಲೂ ವಿಲಕ್ಷಣನು ಎಂಬುವುದು ಶಾಸ್ತ್ರಸಿದ್ಧ. ಈ ವಿಧವಾದ ಶ್ರುತಿಪ್ರಮಾಣಗಳು ಅನೇಕವಿರುವುವು

2 ಅಜಡ–ನೆಂದರೆ ಸ್ವಯಂಪ್ರಕಾಶ ಸ್ವರೂಪನು. ತನ್ನ ಅರಿವು ತನಗೆ ಯಾವಾಗಲೂ ಇರುವನು. ಅಜಡ ಎಂದರೆ ಜಡಕ್ಕೆ ವ್ಯತಿರಿಕ್ತ (Alive; Alert) "ಆತ್ಮಾ ಜ್ಞಾನಮಯಃ" ಎಂದರೆ ಜ್ಞಾನಸ್ವರೂಪನು ಎಂದು ಶ್ರುತಿ ಹೇಳುವುದು.

3 ಆನಂದಸ್ವರೂಪನು–ಎಂದರೆ ತನ್ನ ಸ್ವರೂಪವೇ ಆನಂದವು, ಎಂದರೆ ಸುಖಸ್ವರೂಪನು ಎಂದು ಅರ್ಥ "ಜ್ಞಾನಾನಂದಮಯಸ್ತ್ವಾತ್ಮಾ– "ಜ್ಞಾನಾನಂದೈಕಲಕ್ಷಣಂ" ಇತ್ಯಾದಿ ಶ್ರುತಿಗಳು ಆತ್ಮನ ಆನಂದ ಸ್ವರೂಪತ್ವವನ್ನು ಪ್ರತಿಪಾದಿಸುತ್ತವೆ. ಅದರಿಂದಲೇ ಜೀವರುಗಳು ಸ್ವಭಾವಸಿದ್ಧವಾದ ತಮ್ಮ ಆನಂದಕ್ಕಾಗಿ ಪ್ರಯತ್ನಿಸುವರು

4 ಅಣುಸ್ವರೂಪನು—ಎಂದರೆ ಆತ್ಮನ ಗಾತ್ರ ಅಣುವಿನಂತೆ ಸೂಕ್ಷ್ಮವಾದದ್ದು. ಸೂಕ್ಷ್ಮಾತಿಸೂಕ್ಷ್ಮನು. "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ (ಮುಂ. 3–1–9) ಎಂದು ಶ್ರುತಿಯು ಆತ್ಮನನ್ನು ಅಣುಸ್ವರೂಪನೆನ್ನುವುದು. ಹಾಗೆ ಅಣುಸ್ವರೂಪನಾದ ಆತ್ಮನು ಹೃದಯದಲ್ಲಿ ಒಂದು ಸ್ಥಳದಲ್ಲಿದ್ದಾಗ್ಯೂ – ಒಂದು ಕೊಠಡಿಯ ಮಧ್ಯೆ ಒಂದು ದೀಪವನ್ನಿಟ್ಟಾಗ ಅದರ ಬೆಳಕು ಆ ಕೊಠಡಿಯನ್ನೆಲ್ಲಾ ಹೇಗೆ ವ್ಯಾಪಿಸಿಬೆಳಗಿಸುವುದೋ ಹಾಗೆಯೇ ಹೃದಯದ ಏಕದೇಶದಲ್ಲಿರುವ ಆತ್ಮನು ತನ್ನ ಜ್ಞಾನವ್ಯಾಪ್ತಿಯಿಂದ ದೇಹವೆಲ್ಲವನ್ನೂ ವ್ಯಾಪಿಸಿ ಪೂರ್ಣವಾದ ದೇಹದ ಸುಖದುಃಖಗಳನ್ನು ಅನುಭವಿಸುವನು.

5. ಅವ್ಯಕ್ತನೆಂದರೆ – ಘಟ ಪಟಾದಿಗಳನ್ನು ಇಂದ್ರಿಯಗಳು ಗ್ರಹಿಸುವಂತೆ ಆತ್ಮನು ಇಂದ್ರಿಯಗಳಿಗೆ ಅಗೋಚರನು ಎಂದು ಅರ್ಥ.

6. ಅಚಿಂತ್ಯನೆಂದರೆ – ಅಚಿತ್ತಾದ ಪ್ರಾಕೃತ ವಸ್ತುಗಳೊಡನೆ ಸಜಾತೀಯವಾಗಿ ಈ ಆತ್ಮನನ್ನು ನೆನೆಯಲಾಗುವುದಿಲ್ಲ "ಅವ್ಯಕ್ತೋಽಯಮಚಿಂತ್ಯೋಽಯಂ" ಎಂದು ಭಗವದ್ಗೀತೆಯಲ್ಲಿ ಆತ್ಮನ ಲಕ್ಷಣಗಳನ್ನು ವಿವರಿಸಿರುವುದು.

7. ನಿರವಯವ – ನೆಂದರೆ ದೇಹದಂತೆ ಅವಯವ ಸಮುದಾಯಗಳಿಂದ ಕೂಡಿರದೆ ಒಂದೇ ಪದಾರ್ಥವಾಗಿ ತಾನೇ ತಾನಾಗಿರುವಿಕೆ.

8. ನಿರ್ವಿಕಾರನೆಂದರೆ–ಅಚಿತ್ತಿನಂತೆ ಪರಿಣಾಮಗಳಿಲ್ಲದಂತೆ ಒಂದೇ ವಿಧವಾಗಿರುವಿಕೆ. ಆದರಿಂದಲೇ ಆತ್ಮನನ್ನು ಶಸ್ತ್ರಗಳು ಛೇದಿಸಲಾರವು, ನೀರು ಅದನ್ನು ನೆನೆಸಲಾರದು, ಅಗ್ನಿ ದಹಿಸಲಾರದು, ಗಾಳಿ ಕದಲಿಸಲಾರದು.

9. ಜ್ಞಾನಾಶ್ರಯನೆಂದರೆ–ಜ್ಞಾನಕ್ಕೆ ತಾನು ಮನೆಯಂತಿರುವುದು ಆತ್ಮನ ಮುಖ್ಯಗುಣವೇ ಜ್ಞಾನ, "ಆತ್ಮಾಜ್ಞಾನಮಯಃ" ಎಂದು ಶ್ರುತಿ ಘೋಷಿಸಿರುವುದು.

10 ಈಶ್ವರನಿಯಾಮ್ಯ – ನೆಂದರೆ ಈಶ್ವರನ ಸಂಕಲ್ಪಕ್ಕೆ ಅಧೀನವಾದ ಪ್ರವೃತ್ತಿಗಳನುಳ್ಳವನು ಎಂದು ಅರ್ಥ. ಆದರಿಂದಲೇ ಆತ್ಮನು ಈಶ್ವರನಿಗೆ ಶರೀರವು ಎಂದು ಹಿಂದೆಯೇ ಹೇಳಿರುವುದು. ಶರೀರವು ಆತ್ಮನಿಗೆ ಸರ್ವವಿಧದಲ್ಲೂ ಅಧೀನವಾಗಿರಬೇಕಾದ್ದರಿಂದ ಈಶ್ವರ ನಿಯಾಮ್ಯತ್ವವು ಆತ್ಮನಿಗೆ ಸ್ವಾಭಾವಿಕವು.

11. ಧಾರ್ಯನೆಂದರೆ–ಈಶ್ವರನ ಸ್ವರೂಪ ಸಂಕಲ್ಪಾದಿಗಳಿಲ್ಲದಿದ್ದರೆ ತನಗೆ ಸತ್ತೆ (ಎಂದರೆ ಇರುವಿಕೆಯೇ) ಇಲ್ಲದಿರುವುದು. ಇದು ಶರೀರಗಳಾದ ಚಿತ್ತು, ಅಚಿತ್ತುಗಳೆರಡಕ್ಕೂ ಸ್ವಾಭಾವಿಕವಾದ ಧರ್ಮ. ಶರೀರವು ಆತ್ಮನಿಂದ ಧರಿಸಲ್ಪಟ್ಟಿರುವುದು ಸ್ವವ್ಯಕ್ತ. ಆತ್ಮನ ಆಧಾರದಿಂದಲೇ ಶರೀರವು ನಿಂತಿರುವುದು

12 ಆತ್ಮನು ಈಶ್ವರನಿಗೆ ಶೇಷನು – ಎಂಬುವುದು ಕೂಡ ಈ ಶರೀರ ಸಂಬಂಧದಿಂದ ಸ್ವತಸ್ಸಿದ್ಧವು. ಇದನ್ನೇ "ಆತ್ಮದಾಸ್ಯಂ ಹರೇಸ್ಸ್ವಾಮ್ಯಂ ಸ್ವಭಾವಂಚ ಸದಾಸ್ಮರ" ಎಂದರೆ ಜೀವಾತ್ಮನು ಪರಮಾತ್ಮನಿಗೆ ಸ್ವಾಭಾವಿಕವಾಗಿಯೇ ಶೇಷಭೂತನು ಎಂಬುವುದು ಶಾಸ್ತ್ರಸಿದ್ಧವು ಜೀವಾತ್ಮನ ವಿಷಯದಲ್ಲಿ ಇಷ್ಟುಮಾತ್ರ ಹೇಳಿ ಮುಗಿಸುವೆವು

## ಈಶ್ವರ :

ಚಿದಚಿತ್ತುಗಳನ್ನು ಸಂಕ್ಷೇಪವಾಗಿ ವಿವರಿಸಿದ ನಂತರ ಪ್ರಕರಣರೀತ್ಯಾ ಮೂರನೆ ತತ್ತ್ವವಾದ ಈಶ್ವರನ ವಿಷಯವಾಗಿ ಸ್ವಲ್ಪ ಹೇಳುವುದು ಅವಶ್ಯಕ

ಈಶ್ವರನು ಚಿತ್ತು ಅಚಿತ್ತುಗಳಿಗಿಂತಲೂ ಬೇರೆಯಾದವನು; ವಿಲಕ್ಷಣನಾದವನು. ಅವನು ನಿರ್ಮಲನು ತಾನು ಸಮಸ್ತದೋಷಗಳಿಂದಲೂ ವರ್ಜಿತನಾಗಿರುವುದಲ್ಲದೆ ಇತರರ ದೋಷಗಳನ್ನು ತನ್ನ ಸಂಕಲ್ಪಮಾತ್ರದಿಂದಲೇ ನಿವೃತ್ತಿಮಾಡಬಲ್ಲನು. ಅವನು ಸತ್ಯಸ್ವರೂಪನು, ಜ್ಞಾನಾನಂದಮಯನು. ವಿಭು ಎಂದರೆ ಸರ್ವವ್ಯಾಪಿ, ಸರ್ವಶಕ್ತನು, ಸಮಸ್ತ ಜಗತ್ತನ್ನೂ ಸೃಷ್ಟಿಸಿ ಪಾಲಿಸುವುದಕ್ಕೆ ಅವಶ್ಯಕವಾದ ಜ್ಞಾನ, ಶಕ್ತಿ, ಬಲ ಐಶ್ವರ್ಯ, ವೀರ್ಯ, ತೇಜಸ್ಸು ಇತ್ಯಾದಿಗಳನ್ನು ಅನಂತವಾಗಿ ಹೊಂದಿರುವನು. ಈ ಕಾರ್ಯಗಳೆಲ್ಲವನ್ನೂ ಅವನ ಶಕ್ತಿಯಲ್ಲಿ ಕೋಟ್ಯಂಶದ ಒಂದು ಪಾಲಿನಲ್ಲಿ ಲೀಲಾಜಾಲವಾಗಿ ನಡೆಸುತ್ತಿರುವನು. ಆದರಿಂದಲೇ ಈ ಅನನ್ತಕೋಟಿ ಬ್ರಹ್ಮಾಂಡಗಳ ಸೃಷ್ಟಿಸ್ಥಿತಿ ಲಯ ಕಾರ್ಯಗಳನ್ನು ಪರಮಾತ್ಮನ ಲೀಲಾವಿಭೂತಿಯೆಂದು ಶಾಸ್ತ್ರಗಳು ಹೇಳುವುವು. ಅವನ ಕಲ್ಯಾಣಗುಣಗಳು ಅಸಂಖ್ಯಾತಗಳಾಗಿ ಊಹಿಸಲಾರದಷ್ಟು ಅಪಾರವಾಗಿರುವುವು. "ಅಸಂಖ್ಯೇಯ ಕಲ್ಯಾಣಗುಣಗಣೌಘಮಹಾರ್ಣವ" ಎಂದು ಪರಮಾತ್ಮನ ಕಲ್ಯಾಣಗುಣಗಣಗಳ ವರ್ಣನೆ ಶಾಸ್ತ್ರಗಳಲ್ಲಿರುವುದು. ಸಮಸ್ತ ಜಗತ್ತನ್ನೂ ಸೃಷ್ಟಿಸಿ ಪಾಲಿಸುವವನು ಇವನೇ ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿಗಳೆಂಬ ಚತುರ್ವಿಧ ಉಪಾಸಕರಿಗೆ ಅವರ ಇಷ್ಟಾರ್ಥಗಳನ್ನು ಇವನೇ ಅನುಗ್ರಹಿಸುವನು. ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಮಾನವ ಕೋಟಿಗೆ ಅನುಗ್ರಹಿಸುವವನು ಈಶ್ವರನೇ. ತನ್ನನ್ನು ಉಪಾಸಿಸುವ ಭಕ್ತರಿಗೆ ಅವರವರು ಕೋರಿದ ರೂಪದಲ್ಲಿ ದರ್ಶನವಿತ್ತು ಅವರನ್ನು ಉದ್ಧರಿಸುವನು. ವಿಲಕ್ಷಣ ವಿಗ್ರಹಯುತನಾಗಿ ವೈಕುಂಠ ವಿಷ್ಣುಲೋಕ ಇವುಗಳಲ್ಲಿ ಲಕ್ಷ್ಮೀಭೂನೀಳಾ ಸಮೇತನಾಗಿ ನೆಲೆಸಿರುವವನು ಪರಬ್ರಹ್ಮನಾದ ಈಶ್ವರನೇ.

# ವಾಲ್ಮೀಕಿಯ ಶ್ರೀರಾಮ

'ರಾಮಾಯಣ' ಎಂದೆಂದಿಗೂ ತನ್ನ ಸಾಂದರ್ಭಿಕತೆಯನ್ನು ಕಳೆದುಕೊಳ್ಳದ, ಇಂದಿಗೂ ಪ್ರಸ್ತುತವಾಗುವ ಒಂದು ಜನಪರ ಕಾವ್ಯ. "ರಾಮಸ್ಯ ಅಯನಂ" ಎಂದು ವಿಗ್ರಹ ಮಾಡಿದರೆ ಅದು ರಾಮನ ಚರಿತ್ರೆಗೆ ಒತ್ತು ನೀಡಿದಂತಾಗುತ್ತದೆ "ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್" (ಬಾಲಕಾಂಡ. 4-7) ಎಂದು ವಾಲ್ಮೀಕಿ ಮಹರ್ಷಿ ವರ್ಣಿಸುತ್ತಾರೆ ಇಲ್ಲಿ ಮಹರ್ಷಿಯ ಇಂಗಿತದಂತೆ "ರಾಮಾಯಾಃ ಅಯನಂ" ಎಂದು ವಿಗ್ರಹ ಮಾಡಿದರೆ ಸೀತೆಯ ಚರಿತ್ರೆಗೆ ಒತ್ತು ಕೊಟ್ಟಂತಾಗುತ್ತದೆ ಅಂತೂ ರಾಮಾಯಣದ ಒತ್ತು ಶೀಲವನ್ನು ಕುರಿತಾದ್ದರಿಂದ ಪ್ರತಿಯೊಬ್ಬನೂ ಇದನ್ನು ಆಪ್ತವಾಗಿ ಪರಿಭಾವಿಸಿಕೊಂಡು ಓದಿದಾಗ ಆ ಓದು ಓದಾಗುತ್ತದೆ.

"ರಾಮಾಯಣ"ದ ಕೇಂದ್ರವ್ಯಕ್ತಿ 'ರಾಮ'. ರಾಮನ ಬದುಕನ್ನು ಮೊತ್ತಮೊದಲು ತನ್ನ ಕಾವ್ಯದ ವಸ್ತುವನ್ನಾಗಿ ಬಳಸಿಕೊಂಡ ಶ್ರೇಯಸ್ಸು ವಾಲ್ಮೀಕಿ ಮಹರ್ಷಿಗಳಿಗೆ ಸಲ್ಲುತ್ತದೆ. ಚಾರಿತ್ರವಂತ ಮಾನವನನ್ನು ಅರಸುತ್ತ ಅರಸುತ್ತ ಕಟ್ಟಕಡೆಗೆ ವಾಲ್ಮೀಕಿ 'ಚಾರಿತ್ರೇಣ ಚ ಕೋ ಯುಕ್ತಃ?' (ಬಾಲಕಾಂಡ -1-3) ಎಂದು ನಾರದರನ್ನು ಪ್ರಶ್ನಿಸುತ್ತಾರೆ. ಆಗ ನಾರದರು "ತೈರ್ಯುಕ್ತಃ ಶ್ರೂಯತಾಂ ನರಃ" (ಬಾಲಕಾಂಡ -1-7) ಎನ್ನುತ್ತ ಸಕಲಗುಣಸಂಪನ್ನನಾದ ಮಾನವ ರಾಮನನ್ನು ಹೆಸರಿಸುತ್ತಾರೆ. ಅಂತೂ ಮಾನವನಾದ ರಾಮ ರಾಮಾಯಣವನ್ನು ವ್ಯಾಪಿಸುತ್ತಾನೆ—ಎಂಬುದು ಗಮನಾರ್ಹವಾದದ್ದು.

ವಾಲ್ಮೀಕಿ ಕಂಡ ರಾಮ ಮೂಲತಃ ಲೋಕಾಪವಾದಕ್ಕೆ ಅಂಜುವವನು. ಅಪಯಶಸ್ಸಿಗಿಂತಲೂ ಮರಣವೇ ಲೇಸೆಂದು ಬಗೆಯುವವನು. ಆದ್ದರಿಂದ ಅವನು ಜಾನಕಿಯ ಶೀಲವನ್ನು ಶಂಕಿಸುತ್ತಾನೆ. ತರುವಾಯ ಅವಳನ್ನು ಅಗ್ನಿಪರೀಕ್ಷೆಗೆ ಗುರಿಪಡಿಸುತ್ತಾನೆ. ಅನಂತರ ಬ್ರಹ್ಮಾದಿ ದೇವತೆಗಳು ರಾಮನನ್ನು ಸಂತೈಸಲು ಬಂದಾಗ 'ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ' (ಯುದ್ಧಕಾಂಡ 120-11) ಎಂದು ಅವನು ಹೇಳುತ್ತಾನೆ. ಅಂತೂ ಅಗ್ನಿಪರೀಕ್ಷೆಯ ಪ್ರಸಂಗ ಮಾನವನಂತೆ ವರ್ತಿಸುವ ರಾಮನನ್ನು ಇಡಿಯಾಗಿ ಬಿಚ್ಚಿತೋರಿಸುತ್ತದೆ. ರಾಮ ಮೇಲ್ನೋಟಕ್ಕೆ ಕಠೋರನಾದರೂ ಲೋಕಾಪವಾದಕ್ಕೆ ಅಂಜುವ ಅವನ ಅಂತರಂಗ ಮಾನವನ ಗಟ್ಟಿತನವನ್ನು ಪ್ರದರ್ಶಿಸುತ್ತದೆ

ರಾಮನ "ಲೋಕಭೀತಿ" ಒಂದು ಗ್ರಾಹ್ಯ ಗುಣವಾದದ್ದು ಅಪಕೀರ್ತಿಗೆ ಅಂಜದೆ ನಿರ್ಲಜ್ಜವಾಗಿ ತೋಚಿದಂತೆ ಬದುಕುವ ಮಾನವ-ಸಮುದಾಯಕ್ಕೆ ಆರೋಗ್ಯಕರ ಎಚ್ಚರಿಕೆಯಾಗುತ್ತದೆ. ರಾಮ ನಮ್ಮೆಲ್ಲರಿಗೆ ಆತ್ಮೀಯನಾಗಿ ಮತ್ತಷ್ಟು ಹತ್ತಿರವಾಗುತ್ತಾನೆ.

ವಾಲ್ಮೀಕಿ ಕಂಡ ರಾಮ ಸ್ವಭಾವತಃ ಕೋಮಲ. ಅವನು ಬೇರೆಯವರು ತನಗೆ ಮಾಡಿದ ನೂರಾರು ಅಪಕಾರಗಳನ್ನು ಮರೆಯುತ್ತಾನೆ ಆದರೆ ಒಂದು ಉಪಕಾರವನ್ನೂ ಸ್ಮರಿಸುತ್ತಾನೆ ಅಪಕಾರ-ವಿಸ್ಮರಣೆ ಮತ್ತು ಉಪಕಾರ-ಸ್ಮರಣೆಗಿಂತಲೂ ಹಿರಿದಾದ ಗುಣ ಮತ್ತೊಂದಿಲ್ಲ. ಆಂಜನೇಯನು ತನಗೆ ಮಾಡಿದ ಉಪಕಾರವನ್ನು ರಾಮ ಹೀಗೆ ನೆನೆಯುತ್ತಾನೆ.

ಮಯ್ಯೇವ ಜೀರ್ಣತಾಂ ಯಾತು
ಯತ್ತ್ವಯೋಪಕೃತಂ ಹರೇ ।
ನರಃ ಪ್ರತ್ಯುಪಕಾರಾರ್ಥೀ
ವಿಪತ್ತಿಮಭಿಕಾಂಕ್ಷತೇ ॥

"ಹೇ ಕಪಿನಂದನ;(ಉತ್ತರಕಾಂಡ.40–23). ನೀನು ನನಗೆ ಮಾಡಿದ ಉಪಕಾರ ನನ್ನಲ್ಲೇ ಜೀರ್ಣವಾಗಿ ಕರಗಿಹೋಗಲಿ. ಅದನ್ನು ವಾಚ್ಯವಾಗಿ ಹೇಳುವ ಸಮಯ ಬಾರದಿರಲಿ ಯಾಕೆಂದರೆ ಪ್ರತ್ಯುಪಕಾರ ಮಾಡುವುದೆಂದರೆ ತನ್ನ ಉಪಕಾರಿಗೆ ಕೇಡನ್ನು ಬಯಸಿದಂತಾಗುತ್ತದೆ". ಇಲ್ಲಿ ರಾಮ 'ಉಪಕಾರ' ವನ್ನು ವ್ಯಾಖ್ಯಾನಿಸುವ ಬಗೆ ಬೆರಗು ಹುಟ್ಟಿಸುತ್ತದೆ. ವಸ್ತುತಃ ಉಪಕಾರಿಗೆ ವಿಪತ್ತು ಬಂದಾಗಲೇ ಉಪಕೃತನಾದ ವ್ಯಕ್ತಿಗೆ ಪ್ರತ್ಯುಪಕಾರ ಮಾಡುವ ಸಂದರ್ಭ ಬರುತ್ತದೆ. ಆದರೆ ರಾಮನ ದೃಷ್ಟಿಯಲ್ಲಿ "ಪ್ರತ್ಯುಪಕಾರ"ವೆಂದರೆ ಉಪಕಾರ ಹೊಂದಿದವನು ತನಗೆ ಉಪಕಾರ ಮಾಡಿದವನಿಗೆ ಕೇಡು ಬಯಸುವದೆಂದರ್ಥ. ಇಲ್ಲಿ ರಾಮನ ಕೋಮಲವಾದ ಹೃದಯ ತೆರೆದುಕೊಳ್ಳುತ್ತದೆ. ರಾಮ ತನಗೆ ಉಪಕಾರ ಮಾಡಿದ ಆಂಜನೇಯನಿಗೆ ಕನಸಿನಲ್ಲೂ ಕೇಡು ಬಯಸಲಾರ. "ಉಪಕಾರ" ರಾಮನ ದೃಷ್ಟಿಯಲ್ಲಿ ಒಂದು ಶ್ರೇಷ್ಠ ಮಾನವ-ಧರ್ಮವಾಗಿ ಮೂಡಿಬರುತ್ತದೆ. ಉಪಕೃತನಿಗಿಂತಲೂ ಉಪಕಾರಿ ಸರ್ವಥಾ ಶ್ರೇಷ್ಠನಾಗುತ್ತಾನೆ. ಉಪಕೃತನು ಪ್ರತ್ಯುಪಕಾರ ಮಾಡುವುದೂ ಸ್ವಾರ್ಥಪ್ರೇರಿತವಾದ ಕನಿಷ್ಟ ಕ್ರಿಯೆಯಾಗುತ್ತದೆ. ಇಂದು ಉಪಕಾರಿಯೂ ಉಪಕೃತನಿಂದ ಪ್ರತ್ಯುಪಕಾರ ಬಯಸುತ್ತಾನೆ. ಆದ್ದರಿಂದ 'ಉಪಕಾರ' ಮತ್ತು 'ಪ್ರತ್ಯುಪಕಾರ'ಗಳು ತಮ್ಮ ಹೊಳಪನ್ನೂ ಒಳಾರ್ಥವನ್ನೂ ಕಳೆದುಕೊಂಡಿವೆ. ರಾಮನ ದೃಷ್ಟಿಯಲ್ಲಿ 'ಉಪಕಾರ' ಒಂದು ನಿಷ್ಕಾಮ ಕರ್ಮ ಅದೊಂದು ಶಾಶ್ವತ ಮೌಲ್ಯ. ಆದರೆ 'ಪ್ರತ್ಯುಪಕಾರ' ನಿಷ್ಕಾಮ ಕರ್ಮವಲ್ಲ. ತನಗೆ ಉಪಕಾರ ಮಾಡಿದವನಿಗೆ ವಿಪತ್ತನ್ನು ಬಯಸುವದು, ತರುವಾಯ ಅದನ್ನು ಪರಿಹರಿಸುವುದು "ಪ್ರತ್ಯುಪಕಾರ"ದ ಒಳಾರ್ಥವಾಗುತ್ತದೆ ಆದ್ದರಿಂದ 'ಪ್ರತ್ಯುಪಕಾರ' ಅಪಕಾರಕ್ಕೆ ಹತ್ತಿರವಾಗುತ್ತದೆ ಮತ್ತು ಒಂದು ಶ್ರೇಷ್ಠ ಮೌಲ್ಯವೆನ್ನಿಸಿಕೊಳ್ಳುವದಿಲ್ಲ. ಹೀಗೆ ರಾಮ 'ಉಪಕಾರ' ವನ್ನು ಸಮಂಜಸವಾಗಿ ವ್ಯಾಖ್ಯಾನಿಸಿ ಪ್ರತ್ಯುಪಕಾರಾರ್ಥಿಯನ್ನು ಖಂಡಿಸುವ ಸೂಕ್ಷ್ಮವಾದ ಮನಸ್ಸನ್ನು ಹೊಂದಿದವನು, ಈ ಸೂಕ್ಷ್ಮತೆಯ ಹಿಂದೆ ಕೋಮಲತೆ ಇಣುಕುವುದನ್ನು ನಾವು ಕಾಣುತ್ತೇವೆ. ಅಂತೂ ರಾಮನ ಮನಸ್ಸು ಚಿಂತಕರಿಗೆ ಸೂಕ್ಷ್ಮವಾಗಿ ಕಂಡರೆ ಸಹೃದಯರಿಗೆ ಕುಸುಮಕೋಮಲವಾಗಿ ಕಾಣುತ್ತದೆ

ಅಶೋಕವನದಲ್ಲಿ ಸೀತೆ ಸೆರೆಯಲ್ಲಿದ್ದಾಗ ಆಂಜನೇಯ ಆಕೆಯನ್ನು ಕಾಣುತ್ತಾನೆ ಆಗ ಅವನು ರಾಮನ ವಿರಹದ ಔಚಿತ್ಯವನ್ನು ಮನಗಾಣುತ್ತಾನೆ. ರಾಮ ತನ್ನಲ್ಲೇ ಅನುಭವಿಸುತ್ತಿರುವ ನಾಲ್ಕು ಬಗೆಯ ಪರಿತಾಪವನ್ನು ಇಡಿಯಾಗಿ ಸಹೃದಯ ಓದುಗರ ಮುಂದೆ ತೆರೆದಿಡುತ್ತಾನೆ. ಸೀತಾಪಹರಣದ ನಂತರ ವಿರಹದಗ್ಧನಾದ ರಾಮ ಬಿಕ್ಕಿ ಬಿಕ್ಕಿ ಬಿರುತ್ತ ತನ್ನ ನೋವನ್ನು ಕಾರುವ ಪ್ರಸಂಗ ಹೃದಯ-ವಿದ್ರಾವಕವಾದದ್ದು. ಇದನ್ನು ಆಂಜನೇಯನ ಬಾಯಿಂದ ಹೇಳಿಸಿದಾಗಲೇ ವಾಲ್ಮೀಕಿ ಮಹರ್ಷಿಗಳಿಗೆ ಎಲ್ಲಿಲ್ಲದ ತೃಪ್ತಿ. —

ಇಯಂ ಸಾ ಯತ್ಕೃತೇ ರಾಮಃ
ಚತುರ್ಭಿಃ ಪರಿತಪ್ಯತೇ ।
ಕಾರುಣ್ಯೇನಾನೃಶಂಸ್ಯೇನ
ಶೋಕೇನ ಮದನೇನ ಚ ॥
ಸ್ತ್ರೀಪ್ರಣಷ್ಟೇತಿ ಕಾರುಣ್ಯಾ
ದಾಶ್ರಿತೇತ್ಯಾನೃಶಂಸ್ಯತಃ ।
ಪತ್ನೀನಷ್ಟೇತಿ ಶೋಕೇನ
ಪ್ರಿಯೇತಿ ಮದನೇನ ಚ ॥
(ಸುಂದರಕಾಂಡ 16–49–50)

ಶ್ರೀ ವಿ. ಡಿ. ಹೆಗಡೆ

ಆಂಜನೇಯನ ಈ ಸ್ವಗತದಲ್ಲಿ ರಾಮ-ಹೃದಯ ಚತುರ್ವಿಧ ಪರಿತಾಪದಿಂದ ನರಳುತ್ತ ಬಿಚ್ಚಿಕೊಳ್ಳುತ್ತದೆ ಇಲ್ಲಿ ರಾಮ-ಸೀತೆಯರ ಸಂಬಂಧ ನಾಲ್ಕು ಬಗೆಯಲ್ಲಿ ವರ್ಣಿತವಾಗಿದೆ ಸೀತೆಯಲ್ಲಿ "ಸ್ತ್ರೀ" ರೂಪವನ್ನು ಕಂಡು ಅದನ್ನು ರಕ್ಷಿಸಲು ಅಸಮರ್ಥನಾದ ರಾಮ ತನ್ನ ಅಸಹಾಯಕತೆಯನ್ನು ನೆನೆದು ಮರುಗುತ್ತಾನೆ ಅನಂತರ ಸೀತೆಯಲ್ಲಿ "ಆಶ್ರಿತೆ", "ಪತ್ನಿ" ಮತ್ತು "ಪ್ರಿಯೆ" ಯನ್ನು ಕಂಡ, ಯಾರನ್ನೂ ರಕ್ಷಿಸಲಾರದ ತನ್ನ ಅಸಾಮರ್ಥ್ಯಕ್ಕೆ ಮಮ್ಮಲ ಮರುಗುತ್ತಾನೆ 'ಸ್ತ್ರೀ' 'ಆಶ್ರಿತೆ' 'ಪತ್ನಿ' 'ಪ್ರಿಯೆ' ಈ ನಾಲ್ವರ ನಷ್ಟದಿಂದ ರಾಮನ ಹೃದಯದಲ್ಲಿ 'ಕಾರುಣ್ಯ', 'ದಯೆ', 'ಶೋಕ' "ಮದನ" — ಈ ನಾಲ್ಕು ಭಾವಗಳು ಒಂದೊಂದಾಗಿ ಉದಯಿಸಿ ಸಂಕಟವಾಗಿ 'ಚತುರ್ವಿಧ ಪರಿತಾಪ"ಕ್ಕೆ ಎಡೆ ಮಾಡಿಕೊಡುತ್ತವೆ.

"ರಾಮ-ದರ್ಶನ" ವನ್ನು ಕುರಿತ ವಾಲ್ಮೀಕಿ ಮಹರ್ಷಿಗಳ ಉಕ್ತಿ ರಾಮಾಯಣದ ಇಡಿಯಾದ ಸಂದೇಶವಾಗಿ ಹೊರಹೊಮ್ಮುತ್ತದೆ

ಯಶ್ಚ ರಾಮಂ ನ ಪಶ್ಯೇತು
ಯಂ ಚ ರಾಮೋ ನ ಪಶ್ಯತಿ ।
ನಿಂದಿತಃ ಸ ಭವೇಲ್ಲೋಕೇ
ಸ್ವಾತ್ಮಾಪ್ಯೇನಂ ವಿಗರ್ಹತೇ ॥
(ಅಯೋಧ್ಯಾಕಾಂಡ 17-14, 15)

ಯಾರು ರಾಮನನ್ನು ನೋಡುವದಿಲ್ಲವೋ ಅವನು ನಿಂದನೆಗೆ ಯೋಗ್ಯ. ಯಾರನ್ನು ರಾಮನು ನೋಡುವುದಿಲ್ಲವೋ ಅವನೂ ನಿಂದಿಸಲ್ಪಡುತ್ತಾನೆ. ಹೀಗೆ ರಾಮದರ್ಶನದಿಂದ ವಂಚಿತನಾದವನನ್ನು ಅವನ ಅಂತಃಕರಣವೇ ನಿಂದಿಸುತ್ತದೆ ಇಲ್ಲಿ 'ರಾಮ-ದರ್ಶನ' ವನ್ನು 'ರಾಮಕರ್ಮಕ ದರ್ಶನ' ಮತ್ತು "ರಾಮಕರ್ತೃಕ ದರ್ಶನ" ವೆಂದು ವ್ಯಾಖ್ಯಾನಿಸಿದಾಗ ಮಾತ್ರ ನಾವು ರಾಮಾಯಣದ ಒಳದನಿಯನ್ನು ಕೇಳಿಸಿಕೊಳ್ಳುತ್ತಾಗುತ್ತದೆ

ವಾಲ್ಮೀಕಿಯ ದೃಷ್ಟಿಯಲ್ಲಿ ರಾಮನನ್ನು ಕಾಣುವ ಕಣ್ಣುಗಳನ್ನು ಪಕ್ಕಕ್ಕೆ ಹೊರಳಿಸಿ ಹಿಂದಿರುಗಿ "ರಾಮ-ಪರಾಙ್ಮುಖ"ನಾಗುವುದು ಅಸಾಧ್ಯ.—

ನ ಹಿ ತಸ್ಮಾನ್ಮನಃ ಕಶ್ಚಿತ್
ಚಕ್ಷುಷೀ ವಾನರೋತ್ತಮಾತ್ ।
ನರಃ ಶಕ್ನೋತ್ಯಪಾಕ್ರಷ್ಟುಂ
ಮತಿಕ್ರಾಂತೇಪಿ ರಾಘವೇ ॥
(ಅಯೋಧ್ಯಾಕಾಂಡ, 17-13, 14)

ಹೀಗೆ ರಾಮ ಪರಾಙ್ಮುಖನು ಆತ್ಮ ಪರಾಙ್ಮುಖನಾಗಿ ನಶಿಸುತ್ತಾನೆ. ರಾಮಾಭಿಮುಖನು ಆತ್ಮಾಭಿಮುಖನಾಗಿ ಮುನ್ನಡೆಯುತ್ತಾನೆ. ಹೀಗೆ ಅರ್ಥೈಸಿದಾಗಲೇ ವಾಲಿಯ ಪರಾಙ್ಮುಖವಧೆ ಸಂಗತವಾಗುತ್ತದೆ ರಾಮ-ಪರಾಙ್ಮುಖನಾದ ವಾಲಿ ಆತ್ಮಪರಾಙ್ಮುಖನಾಗಿ ಅಳಿಯುವುದನ್ನು ನಾವು ಕಾಣುತ್ತೇವೆ.

ಒಟ್ಟಂದದಲ್ಲಿ ರಾಮಾಯಣವನ್ನು ಆಪ್ತವಾಗಿ ಪರಿಭಾವಿಸಿಕೊಂಡು ಓದಿದಾಗ ವಾಲ್ಮೀಕಿ ಕಂಡಂತೆ ನಾವು ರಾಮನನ್ನು ಆತ್ಮೀಯವಾಗಿ ಕಾಣುತ್ತೇವೆ. ಆದರೆ ರಾಮಾಯಣದ ಓದು ಒಂದು ಉದ್ವೇಗದ ಕ್ರಿಯೆಯಾಗದೇ, ಮಾನವನ ಶಾಶ್ವತ ಮೌಲ್ಯಗಳ ಅನುಸಂಧಾನವಾದಾಗ ಮಾತ್ರ ಅರ್ಥಪೂರ್ಣವಾಗುತ್ತದೆ ಆಗ ವಾಲ್ಮೀಕಿ ಕಂಡ ರಾಮ ಲೋಕಾಭಿರಾಮನಾಗುತ್ತಾನೆ, ನಯನಾಭಿರಾಮನಾಗುತ್ತಾನೆ.

# ಗೋವಾದಿಂದ ವಲಸೆ ಬಂದ ದೇವತೆಗಳು

ಕ್ರಿ. ಶ 1510 ರ ಸುಮಾರಿಗೆ ಗೋವೆಯ ಪೋರ್ಚುಗೀಸರು ತಮ್ಮ ಆಡಳಿತದ ಕಾಲದಲ್ಲಿ ಸ್ಥಳೀಯರುಗಳ ಮೇಲೆ ಹೆಚ್ಚಿನ ಒತ್ತಡವನ್ನು ಹೇರಲಾರಂಭಿಸಿದರು. ಇದನ್ನು ಸಹಿಸಲಾರದ ನಾಡ ಸಾರಸ್ವತ ಬ್ರಾಹ್ಮಣರು ತಮ್ಮ ದೇವರುಗಳ ಸಮೇತವಾಗಿ ಗೋವಾ ಬಿಟ್ಟು ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಗೆ ವಲಸೆ ಬಂದು ದೇವರನ್ನು ಪ್ರತಿಷ್ಠಾಪಿಸಿ ದೇವಾಲಯಗಳನ್ನು ಕಟ್ಟಿದರು. ಹೀಗೆ ಗೋವಾದಿಂದ ವಲಸೆ ಹೋದ ದೇವಾಲಯಗಳೆಂದರೆ ಮಹಾಲಸಳನ್ನು ಮಾದೋಳಿಗೂ (ಪ್ರಿಯೋಲ); ಮಂಗೇಶಿಯನ್ನು ಪಯೊಲದಲ್ಲಿರುವ ಮಂಗೇಶಿಗೂ, ಶಾಂತಾ ದುರ್ಗಾ ಮತ್ತು ಶಾಂತೇರಿ ಕಾಮಾಕ್ಷಿಯನು ಕವಳೆಗೂ ಕಾಮಾಕ್ಷಿಯನ್ನು ರಾಯಶಿರೋಡೆಗೂ ನಾಗೇಶ ಮತ್ತು ಮಹಾಲಕ್ಷ್ಮಿಯನ್ನು ಬಾಂದಿವಡೆಗೂ ದಾಮೋದರನನ್ನು ಜಾಂಬೋಲಿಗೂ, ಮಹಾಮಾಯಾಳನ್ನು ಕೇದಾರಕ್ಕು, ವಿಜಯದುರ್ಗಾ ಮತ್ತು ನರಸಿಂಹನನ್ನು ವೆಲಿಂಗಕ್ಕೆ. ಮಹಾಗಣಪತಿ ಮತ್ತು ಮಹಾಮಾಯಿಯನ್ನು ಶಿರಾಲಿಗೂ, ಲಕ್ಷ್ಮೀನಾರಾಯಣ ಮತ್ತು ಕುಡತೇರಿ ಮಹಾಮಾಯಿಯನ್ನು ಅಂಕೋಲೆಗೂ, ಕಾತ್ಯಾಯನಿಯನ್ನು ಉತ್ತರ ಕನ್ನಡದ ಅವರ್ಶೆಗೂ, ಶಾಂತೇರಿ ಕಾಮಾಕ್ಷಿಯನ್ನು ಭಟಕಳಕ್ಕು ಮಹಾಮಾಯಿಯನ್ನು ಮಂಗಳೂರಿಗೂ, ಸಮುದ್ರದಿಂದ ತೆಗೆದೆತ್ತಿ ದರಾಂತಾದೇವಿಯನ್ನು ಅನ್ನಜಾತಿಯವರು. ಅವರ್ಶೆಯಲ್ಲೂ, ಸ್ಥಳಾಂತರ ಗೈದು ಪ್ರತಿಮೆಗಳನ್ನು ನಾಶದಿಂದ ರಕ್ಷಿಸಿ ಸುರಕ್ಷಿತವಾಗಿ ಪ್ರತಿಷ್ಠಿಸಿದರು

ಹೀಗೆ ವಲಸೆ ಬಂದ ದೇವರು ಮತ್ತು ದೇವಾಲಯಗಳಲ್ಲಿ ಈ ಕೆಳಗಿನವು ಕೆಲವು ಆಕರ್ಷಣೆ ದೇವಾಲಯಗಳಾಗಿರುವವು.

## ಹನುಮಟ್ಟೆ— ಶ್ರೀಲಕ್ಷ್ಮೀನಾರಾಯಣ ಮಹಾಮಾಯಾ ದೇವಾಲಯ

ಹನುಮಟ್ಟೆಯು ಅಂಕೋಲಾ ತಾಲೂಕಿನ ಸಮೀಪದ ಗ್ರಾಮ. ಹನುಮದೇವರು ಈ ಗ್ರಾಮದ ದೇವರಾಗಿದ್ದು, ಇಲ್ಲಿ ಹನುಮನ ಮಠ ಇರುವುದರಿಂದ ಇದನ್ನು ಹನುಮಟ್ಟಾ ಎಂದು ಕರೆಯುವ ರೂಢಿಯಾಯಿತು. ಮಹಿಷಾಸುರ ಮರ್ದಿನಿ- ಭಗವತೀ ದೇವಿಯೂ ಈ ಗ್ರಾಮದ ದೇವತೆ. ಉತ್ತರದ ಗೌಡ ದೇಶದಿಂದ ಸಾಗಿ ಬಂದ ಗೌಡ ಸಾರಸ್ವತ ಸಮಾಜದವರು ಗೋವೆಯ ನಾಗವ್ವೆ ಗ್ರಾಮದಲ್ಲಿ ನೆಲೆಸಿದವರು. ಈ ಗ್ರಾಮವು ಗೋವೆಯ ಅಘನಾಶಿ ನದಿಯ ಪಾರ್ಶ್ವಕ್ಕೆ ಸಮುದ್ರವನ್ನು ಕೂಡಿಕೊಂಡಿರುವುದು. ಈ ಸಮಾಜದವರು ಶ್ರೀ ಲಕ್ಷ್ಮೀನಾರಾಯಣ ಮಹಾಮಾಯಾ ದೇವರನ್ನು ನಂಬಿಕೊಂಡು ತಮ್ಮ ಜೀವನವನ್ನು ಸಾಗಿಸ ತೊಡಗಿದರು.

ಗೋವೆಯು ಪೋರ್ಚುಗೀಜರ ಆಡಳಿತ ಕಾಲದಲ್ಲಿ, ಶ್ರೀ ಮಹಾಮಾಯಾದೇವಿಯ ಭಕ್ತರು ಸ್ವಧರ್ಮ ರಕ್ಷಣೆಗಾಗಿ ಆ ದೇಶವನ್ನು ಬಿಟ್ಟು ಹೊರಡಲು ಸಿದ್ಧರಾದರು ತಮ್ಮೊಡನೆ ತಾವು ನಂಬಿದ ಮಹಾಮಾಯಾ ದೇವತೆಯನ್ನು ತೆಗೆದು ಕೊಂಡು ಹೋಗಲು ನಿಶ್ಚಯಿಸಿದರು. ಆದರೆ ರೋಹಿಣೀ ರೂಪದಲ್ಲಿದ್ದ ಮಹಾಮಾಯೆಯನ್ನು ತೆಗೆದು ಕೊಂಡು ಹೋಗುವುದಾದರೂ ಹೇಗೆ ಎಂದು ಚಿಂತಾಪರವಶರಾದರು. ಚಿಂತಿಸುತ್ತ, ಚಿಂತಿಸುತ್ತ ನಿದ್ರಾಪರವಶರಾದರು ದೇವಿಯು ರಾತ್ರಿ ನಿದ್ದೆಯಲ್ಲಿ ಈ ಚಿಂತಾಪರವಶರಾದ ಭಕ್ತರ ಮನಸ್ಸಿನಲ್ಲಿ ಕಾಣಿಸಿಕೊಂಡು 'ನಾನು ಸಲಿಯದ ತೆಂಗಿನಕಾಯಿಯ ರೂಪತಾಳಿ ನಿಮ್ಮೊಡನೆ ಬರುತ್ತೇನೆ' ಎಂದು ತಿಳಿಸಿದಳು. ಭಜಕರು ನಾಗವ್ವೇ ಗ್ರಾಮವನ್ನು ಬಿಟ್ಟು ಅಘನಾಶಿ ನದಿಯಿಂದ ಹೊರಟು ಸಮುದ್ರ ತೀರಕ್ಕೆ ಬಂದು ದಕ್ಷಿಣಕ್ಕೆ ಪ್ರಯಾಣ ಮಾಡುತ್ತಾ ಮಾಡುತ್ತಾ ಅಂಕೋಲಾದ ಬಪ್ರುವಾಡಾ ತೀರಕ್ಕೆ ಕ್ರಿ. ಶ. 1510 ರಲ್ಲಿ ಬಂದರು. ಅಲ್ಲಿಂದ ಮುಂದೆ ಸಾಗುತ್ತಾ ಹನುಮಟ್ಟೆಯ ಶ್ರೀ ಮಹಿಷಾಸುರ ಮರ್ದಿನಿ, ಶ್ರೀ ಭಗವತೀ ದೇವಸ್ಥಾನದಲ್ಲಿ ತಂಗಿದರು ರಾತ್ರಿ ನಿದ್ರೆ ಮಾಡಿ ಮರುದಿನ ಮುಂದಿನ ಪ್ರಯಾಣ ನೆನೆದು ಎದ್ದಾಗ ಅವರಿಗೆ ಆಶ್ಚರ್ಯದ ಸಂಗತಿ ಕಾದಿತ್ತು. ಸುಲಿಯದ ತೆಂಗಿನಕಾಯಿಯ ಸುತ್ತಲೂ ರೋಹಿಣಿ (ಹುತ್ತ) ನಿರ್ಮಾಣವಾಗಿತ್ತು. ಇದನ್ನು ಕಂಡ ಭಕ್ತರು ಮುಂದೇನು ಮಾಡಬೇಕೆಂದು ತಿಳಿಯದೇ ಸಂಕಟ ಪಡುತ್ತಿರುವಾಗ ರಾತ್ರಿ ಶ್ರೀ ಮಾತೆಯು ಭಕ್ತರ ಕನಸಿನಲ್ಲಿ ಬಂದು ತಾನು ಮಹಿಷಾಸುರ ಮರ್ದಿನಿ- ಭಗವತಿ ದೇವಿಯ ಹತ್ತಿರ ಇರುವದಾಗಿಯೂ ತಾವೆಲ್ಲರೂ ತಮಗೆ ಅನುಕೂಲವಾದಂತೆ ಅಲ್ಲಿಯೇ ಸುತ್ತ ಮುತ್ತ ನೆಲೆಯೂರಬೇಕೆಂದೂ ವಚನವಿತ್ತಳು ಅದರಂತೆ ಶ್ರೀ ಲಕ್ಷ್ಮೀನಾರಾಯಣ ಮಹಾಮಾಯಾ ದೇವರನು ಹನುಮಟ್ಟೆಯಲ್ಲಿ ಸ್ಥಾಪಿಸಿ ಆಕರ್ಷಕ ದೇವಾಲಯವನ್ನು ಕಟ್ಟಿದರು. ಶ್ರೀ ಮಾತೆಯೊಡನೆ ಅನೇಕ ಉಪದೇವತೆಗಳೂ ನೆಲೆಯೂರಿ ನಿಂತವು. ಇಂದು ಇದು ಕರಾವಳಿಯಲ್ಲಿಯೇ ಅತಿ ಆಕರ್ಷಕ ದೇವಾಲಯವಾಗಿದ್ದು ಭಕ್ತವೃಂದವನ್ನು ಅಪಾರವಾಗಿ ಸೆಳೆಯುತ್ತಲಿದೆ

## ಭಾಂಗರಾ ಮಹಾಮಾಯಾ ಉತ್ಸವ

ಭಾಂಗರಾ ಮಹಾಮಾಯಾ ಎಂದರೆ ಬಂಗಾರದಿಂದ ಮಾಡಿದ ಶ್ರೀಮಾತೆ ಮಹಾಮಾಯೆಯ ಮೂರ್ತಿ. ಹಿಂದೆ ಗೋವೆಯಲ್ಲಿ ನಾಗ್ವೇಶದ ಶೇಟರೆಂಬ ಮನೆತನದವರಿದ್ದರು. ಅವರಿಗೆ ಬಹಳ ಸಮಯದವರೆಗೆ ಸಂತಾನ ಪ್ರಾಪ್ತಿಯಾಗಿರಲಿಲ್ಲ ತಮಗೆ ಸಂತಾನ ಪ್ರಾಪ್ತಿಯಾದರೆ ಬಂಗಾರದ ಮೂರ್ತಿ ಮಾಡಿಸಿ ಕೊಡುವುದಾಗಿ ಶೇಟರು ಮಹಾಮಾಯೆಯಲ್ಲಿ ಹರಕೆ ಹೊತ್ತರು. ಮಹಾಮಾತೆಯು ಒಲಿದು ಶೇಟರಿಗೆ ಸಂತಾನವನ್ನು ನೀಡಿದಾಗ, ಶೇಟರು ಬಂಗಾರದ ಮಹಾಮಾಯೆಯ ಮೂರ್ತಿ ಮಾಡಿಕೊಟ್ಟು ತಮ್ಮ ಹರಕೆಯನ್ನು ಒಪ್ಪಿಸಿದರು. ಈ ಬಂಗಾರದ ಮೂರ್ತಿ ಶೇಟರ ಮಗಳನ್ನೇ ಹೋಲುತ್ತಿತ್ತಂತೆ ಈ ಮೂರ್ತಿಯನ್ನು ಶ್ರೀ ದೇವಿಗೆ ಅರ್ಪಿಸಿದ ಕೂಡಲೇ ಶೇಟರ ಮಗಳ ಪ್ರಾಣ ಹಾರಿ ಹೋಯಿತಂತೆ ಶೇಟರು ದುಃಖಗೊಂಡಾಗ ದೇವಿಯು ಅವರಿಗೆ ಸಂತಾನದ ವರನೀಡಿ ಸಂತೈಸಿ ಉದ್ಧರಿಸಿದಳು. ಇಂದಿಗೂ ಆ ಮೂರ್ತಿ ಭಾಂಗರಾ ಮಹಾಮಾಯಾ ಎಂಬ ಹೆಸರಿನಿಂದಲೇ ಪ್ರಖ್ಯಾತವಾಗಿದೆ.

ಭಾಂಗರಾ ಮಹಾಮಾಯಾ ಮೂರ್ತಿಯನ್ನು ಹೊರಗೆ ತರುವಾಗ ಮೊದಲು ಸನ್ನಿಧಾನದಲ್ಲಿ ಮಹಾಜನ ಪ್ರಸಾದ ಕೇಳಿಕೊಳ್ಳುತ್ತಾರೆ. ಪ್ರಸಾದ ದೊರೆತರೆ ಆಶ್ವಿನ ಶುಕ್ಲ ನವಮಿಯಿಂದ ಚತುರ್ದಶಿಯ ತನಕ ಉತ್ಸವ ನಡೆಯುತ್ತದೆ. 1914 1925, 1952, 19 8, 977, 1985 ಈ ಮೊದಲಾದ ವರ್ಷಗಳಲ್ಲಿ ಭಾಂಗರಾ ಮಹಾಮಾಯಾ ಮೂರ್ತಿಯ ದರ್ಶನ ಸೌಭಾಗ್ಯ ಭಕ್ತರಿಗೆ ಲಭಿಸಿತ್ತು.

ನವರಾತ್ರಿಯ ಉತ್ಸವ ಇಲ್ಲಿ ಬಹಳ ವಿಜೃಂಭಣೆಯಿಂದ ನಡೆಯುವುದು. ಈ ಸಮಯದಲ್ಲಿ ಚಾಂ

ಶ್ರೀ ಎಂ. ಆರ್. ಶಾನಭಾಗ

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಮಂಗಳವಾರ: ಅಷ್ಟದಳಪಾದ ಪದ್ಮಾರಾಧನೆ

ಉದಯ 3–00 ರಿಂದ 3–30 ಸುಪ್ರಭಾತ
(50/- ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ)
,, 3–30 ರಿಂದ 3–45 ವರೆಗೆ ಶುದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ರೂ 100/- ಟಿಕೆಟ್)
,, 4–30 ರಿಂದ 4–45 ವರೆಗೆ ಓಲಗ ಮತ್ತು
ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ರೂ 100/- ಟಿಕೆಟ್) (ಏಕಾಂತ)
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ
ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 11–00 ವರೆಗೆ ಸರ್ವದರ್ಶನ
ಮಧ್ಯಾಹ್ನ 11–00 ರಿಂದ 12–00 ವರೆಗೆ ಶುದ್ಧಿ, ಎರಡನೇ ಅರ್ಚನೆ,
(ಏಕಾಂತ)
(ಮಂಗಳವಾರಗಳಲ್ಲಿ ಮಧ್ಯಾಹ್ನ 11–15 ರಿಂದ 11–45 ವರೆಗೆ
ಅಷ್ಟದಳಪಾದ ಪದ್ಮಾರಾಧನೆ ನಡೆಯುವುದು.)
,, 12–00 ರಿಂದ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ (ರೂ 50/- ಟಿಕೆಟ್)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ಸುಪ್ರಭಾತ (ಏಕಾಂತ)
(ರೂ 50/- ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ)
,, 3–30 ರಿಂದ 3–45 ವರೆಗೆ ಶುದ್ಧಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/–)
,, 4–30 ರಿಂದ 4–45 ವರೆಗೆ ಓಲಗ ಮತ್ತು
ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/–)
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ
ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ
(ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ (ಟಿಕೆಟ್ ರೂ 50/–)

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50 ರೂ ಟಿಕೆಟ್ ಪಡೆದವರಿಗೆ ಮಾತ್ರ ಪ್ರವೇಶ)
,, 3–30 ರಿಂದ 3–45 ವರೆಗೆ ಶುದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/–)
,, 4–30 ರಿಂದ 4–45 ವರೆಗೆ ಓಲಗ, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/–)
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ,
ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ
(ಅರ್ಜಿತ) ಶುದ್ಧಿ, 2ನೇ ಅರ್ಚನೆ.
,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ
(ಟಿಕೆಟ್ ರೂ 50/–)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50/- ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ.)
,, 3–30 ರಿಂದ 4–30 ವರೆಗೆ ಸಳ್ಳಿಂಪು ಶುದ್ಧಿ, ಮತ್ತು
ನಿತ್ಯಕೈಂಕರ್ಯಗಳು
,, 4–30 ರಿಂದ 6–00 ವರೆಗೆ ಅಭಿಷೇಕ (ಅರ್ಜಿತ)
,, 6–00 ರಿಂದ 7–00 ವರೆಗೆ ಸಮರ್ಪಣೆ
,, 7–00 ರಿಂದ 8–00 ವರೆಗೆ ತೋಮಾಲಸೇವೆ ಮತ್ತು
ಅರ್ಚನೆ (ಟಿಕೆಟ್ ರೂ 200/–)
,, 8–00 ರಿಂದ 9–00 ವರೆಗೆ ಗಂಟೆ ಬಲಿ, ಶಾತ್ತುಮೊರೆ
,, 9–00 ರಿಂದ ರಾತ್ರಿ 8–30 ವರೆಗೆ ಸರ್ವದರ್ಶನ
(ಸಂಜೆ 7–00 ರಿಂದ 8–30 ವರೆಗೆ ಸಹಸ್ರ ದೀಪಾಲಂಕಾರ ಸೇವೆ)
ರಾತ್ರಿ 8–30 ರಿಂದ 9–30 ವರೆಗೆ ಶುದ್ಧಿ ಇತ್ಯಾದಿ
,, 9–30 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ
(ಟಿಕೆಟ್ ರೂ 50/–)

---

ಗಮನಿಕೆ :– ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಉಯ್ಯಾಲೆಸೇವೆ, ವಾಹನ ಸೇವೆಗಳು, ವಸಂತೋತ್ಸವ ಮಧ್ಯಾಹ್ನ 1–00 ರಿಂದ 5–00 ನಡುವೆ ನಡೆಯುತ್ತವೆ.
ರಾತ್ರಿಯ ಹೊತ್ತು ಸರ್ವದರ್ಶನದ ವೇಳೆ ಭಕ್ತಯಾತ್ರಿಕರ ಸಾಂದ್ರತೆಯ ಅನುಕೂಲಕ್ಕೆ ತಕ್ಕಂತೆ ರಾತ್ರಿ ಹತ್ತು ಗಂಟೆಯ ನಂತರವೂ ಮುಂದು ವರೆಯುವುದು.

ಪೂಜೆ, ಹರಿವಾಣ ಪೂಜೆ, ಹೂವಿನ ಪೂಜೆಗಳು ನಡೆಯುವವು. ಚೌರಿ ಪೂಜೆಯ ಸಮಯ ಶ್ರೀ ಮಹಾಮಾಯಾ ಮತ್ತು ಶ್ರೀ ಭಗವತಿ ದೇವಿಯ ಸಮ್ಮುಖದಲ್ಲಿ ಅನ್ನದ ರಾಶಿ ಹಾಕಿ ಅದರ ಮೇಲೆ ವಡೆ ರೊಟ್ಟಿಯನ್ನಿಟ್ಟು ಪೂಜೆ ಸಲ್ಲಿಸುವರು. ಅಶ್ವೀಜ ಶುದ್ಧ ಪಂಚಮಿಯಲ್ಲಿ ಕಾವಲಿಯಲ್ಲಿ ಕುದಿಯುವ ಎಣ್ಣೆಯಲ್ಲಿ ಕೈ ಹಾಕಿ ವಡೆ ತೆಗೆಯುವ ರೋಮಾಂಚಕಾರಕ ಘಟನೆ ನಡೆಯುವುದು. ಈ ಪಂಚಮಿಯು ವಡೆಪಂಚಮಿ ಎಂದೇ ಹೆಸರಾಗಿದೆ. ಈ ಸಮಯದಲ್ಲಿ ದೇವಿಗೆ ಹಲವು ಬಗೆಯ ಹರಕೆಗಳನ್ನು ಅರ್ಪಿಸುವರು. ದೇವಾಲಯದ ಹೊರ ಅಂಗಳದಲ್ಲಿ ಲೋಕಲೆ ಹಾಕುವುದು, ತುಲಾಭಾರ, ಹೂವು, ಹಣ್ಣುಗಳನ್ನು ಅರ್ಪಿಸುವುದು ಮೊದಲಾದ ಕಾರ್ಯಕ್ರಮಗಳು ನಡೆಯುವುವು. ಮಾಘ ಶುದ್ಧ ಪಂಚಮಿಗೆ ಸುವಾಸಿನಿಯರ ಸೇವೆ ನಡೆಯುತ್ತದೆ. ಸುವಾಸಿನಿಯರು ಏಳು ಹಣತೆಗಳ ದೀಪ ಇಟ್ಟುಕೊಂಡು ದೇವಸ್ಥಾನಕ್ಕೆ ಪ್ರದಕ್ಷಿಣೆ ಹಾಕುವುದನ್ನು ನೋಡಲು ಬಹಳ ಜನ ನೆರೆಯುವರು.

## ಆರ್ಯಾದುರ್ಗಾ ದೇವಾಲಯ— ಅಂಕೋಲಾ

ಅಂಕೋಲಾ ಬಸ್ ಸ್ಟ್ಯಾಂಡಿನಿಂದ ಹನುಮಟ್ಟೆಯ ರಸ್ತೆಯಲ್ಲಿ ಒಂದು ಕಿಲೋಮೀಟರ ದೂರದಲ್ಲಿ ಶ್ರೀ ಆರ್ಯಾದುರ್ಗಾ ದೇವಾಲಯವು ವಿರಾಜಿಸುತ್ತದೆ. ಈ ದೇವಿಗೆ ಆರ್ಯಾದುರ್ಗಾ ಎಂದು ಹೆಸರು ಬರಲು ಒಂದು ವಿಶಿಷ್ಟವಾದ ಪೌರಾಣಿಕ ಕಥೆ ಇದೆ. ಗರುಡನು ಒಂದು ಸಲ ತನ್ನ ಚುಂಚುವಿನಲ್ಲಿ ಎರಡು ಸರ್ಪಗಳನ್ನು ಹಿಡಿದುಕೊಂಡು ಹಿಮಾಲಯದ ಮೇಲಿನ ಶತಶೃಂಗ ಪರ್ವತದ ಮೇಲೆ ಹೋಗಿ ಕುಳಿತುಕೊಂಡನು. ಅವನ ಚುಂಚಿನೊಳಗಿಂದ ಎರಡೂ ಸರ್ಪಗಳು ಜಾರಿ ಪರ್ವತದ ಮೇಲೆ ಬಿದ್ದವು. ಅವು ಆ ಪರ್ವತ ಶಿಖರದಲ್ಲಿ ಉದ್ದವಾದ ಬಿಲವನ್ನು ಕೊರೆದು ಅದರೊಳಗೆ ಹೊಕ್ಕಿಕೊಂಡವು. ಆ ಶಿಖರದಲ್ಲಿ ಅನೇಕ ತೀರ್ಥಗಳು ಇದ್ದುದರಿಂದ ದೇವತೆಗಳೂ ಋಷಿಗಳೂ ಅಲ್ಲಿ ತಪಶ್ಚರ್ಯಕ್ಕೆ ಕುಳಿತುಕೊಂಡಿದ್ದರು. ದುರ್ಗಾದೇವಿಯೂ ಸಹ ತಪಸ್ಸಿಗೆ ಅಲ್ಲಿಯೇ ಕುಳಿತುಕೊಂಡಿದ್ದಳು. ಆಕೆ ವಾಸಮಾಡಿದ ಶಿಖರದ ಹೆಸರು ಅಜಶೃಂಗ ಎಂತ ಇತ್ತು. ಇತ್ತ ಗರುಡನು ಕೋಪಾವಿಷ್ಟನಾಗಿ ಅಜಶೃಂಗ ಶಿಖರವನ್ನೇ ಬುಡಸಹಿತ ಕಿತ್ತು ತನ್ನ ಬೆನ್ನಿನ ಮೇಲೆ ಧರಿಸಿ ದಕ್ಷಿಣಕ್ಕೆ ಗೋಕರ್ಣದ ಕಡೆಗೆ ಹಾರಿ ಹೋದನು. ಬ್ರಹ್ಮದೇವನಿಗೆ ಈ ವಿಷಯವು ತಿಳಿದು ಸರ್ಪಗಳ ರಕ್ಷಣೆಗಾಗಿ ಆ ಶಿಖರದ ಮೇಲೆ ತ್ರಿಲೋಕದ ಭಾರವನ್ನು ಹಾಕಿದನು. ಗರುಡನು ಆ ಭಾರವನ್ನು ತಾಳಲಾರದೆ ಅಳುತ್ತಿರುವಾಗ ಅಗಸ್ತ್ಯ ಋಷಿಯು ತನ್ನ ತಪಸ್ಸಾಮರ್ಥ್ಯದಿಂದ ಆ ಪರ್ವತವನ್ನು ಸಮುದ್ರದಲ್ಲಿ ಸ್ಥಾಪಿಸಿ ಗರುಡನನ್ನು ಎಲ್ಲ ಸಂಕಟಗಳಿಂದ ಪಾರುಮಾಡಿದನು.

ಈ ಪ್ರಕಾರ ಅದು ಒಂದು ದ್ವೀಪವಾಗಿ ಅದಕ್ಕೆ ಅಜಾದ್ವೀಪ ಅಥವಾ ಆರ್ಯಾದ್ವೀಪ ಎಂದು ಹೆಸರು ಬಂತು ಮತ್ತು ಆ ಅಜಶೃಂಗ ಪರ್ವತದ ಮೇಲೆ ವಾಸವಾಗಿದ್ದ ದುರ್ಗೆಗೆ ಆರ್ಯಾದುರ್ಗಾ, ಅಜಾದುರ್ಗಾ ಎಂಬ ಹೆಸರು ಪ್ರಾಪ್ತವಾಯಿತು.

ಆರ್ಯಾದುರ್ಗಾ ದೇವಸ್ಥಾನವು ಪ್ರಥಮತಃ ಗೋವ ಪ್ರಾಂತದಲ್ಲಿಯ ಕಾಣಕೋಣ ತಾಲೂಕಿನಲ್ಲಿ ಸಮಾವಿಷ್ಟವಿದ್ದು ಕಾರವಾರ ತಾಲೂಕಿನ ಪಶ್ಚಿಮಕ್ಕಿದ್ದ ಅಂಜದ್ವೀಪದಲ್ಲಿತ್ತು. ಪೋರ್ಚುಗೀಜರು ಗೋವಾ ಪ್ರಾಂತವನ್ನು ವಶಪಡಿಸಿಕೊಳ್ಳುವ ಮೊದಲು ಕ್ರಿ.ಶ 1505 ರಲ್ಲಿ ಅಂಜದ್ವೀಪವನ್ನು ತಮ್ಮ ವಶಪಡಿಸಿಕೊಂಡರು. ಆಗ ಹತ್ತಿರದ ಬಿಣಗಾ ಊರಿನ ನಾಗರಿಕರು ಬಿಣಗಾಕ್ಕೆ ದೇವಿಯನ್ನು ಒಯ್ದು ಸ್ಥಾಪಿಸಿದರು. ಅಲ್ಲಿಂದ ದೇವಿಯನ್ನು ದಕ್ಷಿಣಕ್ಕೆ ತೆಗೆದುಕೊಂಡು ಹೋದರು. ವೈಸೂರಲ್ಲಿ ಪರಿಸ್ಥಿತಿ ಹೊಂದಿ ಬಾರದ್ದರಿಂದ ಅಲ್ಲಿಂದ ದೇವಿಯ ಆಜ್ಞೆಯಂತೆ ಉತ್ತರ ದಿಕ್ಕಿಗೆ ತೆಗೆದುಕೊಂಡು ಹೋಗಿ ಅಂಕೋಲಾ ತಾಲೂಕಿನ ವಂದಿಗೆ ಗ್ರಾಮದ ಹನುಮಟ್ಟೆಯಲ್ಲಿ ಸ್ಥಾಪನೆ ಮಾಡಿದ ಆಖ್ಯಾಯಿಕೆ ಇದೆ. ಇಲ್ಲಿಯ ಗ್ರಾಮಸಂಸ್ಥೆಯಿಂದ ದೇವಾಲಯಕ್ಕೆ ಜಮೀನು ದೊರೆತು, ನಿತ್ಯ ಅಮೃತಪಡಿ ನಂದಾದೀಪಗಳ ವ್ಯವಸ್ಥೆ ಆಯಿತು. ಬಿಣಗಾದಲ್ಲಿ ವಿಗ್ರಹವಿಲ್ಲದಿದ್ದರೂ ಪೀಠಕ್ಕೆ ಇಂದಿಗೂ ಪೂಜೆ ನಡೆಯುತ್ತದೆ.

ಆರ್ಯಾದುರ್ಗಾ ದೇವಾಲಯವು ಅಂಕೋಲಾದಲ್ಲಿ ಸ್ಥಾಪನೆಯಾಗಿ 400 ವರ್ಷಗಳಾದವು. ಕ್ರಿ. ಶ. 1851 ರಲ್ಲಿ ಒಮ್ಮೆ ಜೀರ್ಣೋದ್ಧಾರವಾಗಿದ್ದು ತದನಂತರ 1929–30 ರಲ್ಲಿ ಚೌಕದ ಸಹಿತ ಮುಂದಿನ ಭಾಗದ ಜೀರ್ಣೋದ್ಧಾರವಾಗಿರುತ್ತದೆ.

ದೇವಾಲಯವು ಪೂರ್ವಾಭಿಮುಖವಾಗಿ ಇದ್ದು ಪ್ರಾಕಾರದ ಮಹಾದ್ವಾರವು ಉತ್ತರ ದಿಕ್ಕಿಗೆ ಇರುವುದು. ಮಹಾದ್ವಾರದ ಹತ್ತಿರ ತಲುಪಿದಾಗ ತಾಮ್ರಪಟ್ಟಿ ಹೊದಿಸಿದ ದೇವಸ್ಥಾನದ ಶಿಖರವು ಕಾಣುವುದು. ಆರ್ಯಾದುರ್ಗಾ ದೇವಿಯ ಮೂರ್ತಿಯು ಪಂಚಲೋಹದಿದ್ದು ನಾಲ್ಕು ಕೈಗಳಿದ್ದು ನಿಂತ ಭಂಗಿಯಲ್ಲಿದೆ. ಹಿಂದಿನ ಬಲಗೈಯಲ್ಲಿ ಚಕ್ರವೂ, ಎಡಗೈಯಲ್ಲಿ ಶಂಖವೂ, ಮುಂದಿನ ಬಲಗೈಯಲ್ಲಿ ಖಡ್ಗವೂ, ಎಡಗೈಯಲ್ಲಿ ಢಾಲನ್ನೂ ಧರಿಸಿ ಕೊರಳಲ್ಲಿ ವೈಜಯಂತಿಮಾಲೆಯನ್ನು ಧರಿಸಿರುವಳು. ದೇವಿಗೆ ಚಂಡಿಕಾದೇವಿ, ಮಲಯಾಳ ಪುರುಷ,

### ಗಮನಿಸಿ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

• ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

• ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

• ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

ಸೋಮೇಶ್ವರ, ಕ್ಷೇತ್ರಪಾಲ ಮೊದಲಾದ ಪರಿವಾರ ದೇವತೆಗಳಿವೆ.

## ಉತ್ಸವಗಳು

ನವರಾತ್ರಿಯ ಉತ್ಸವವು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಶ್ರೀದೇವಿಗೆ ಒಂಬತ್ತು ದಿನ ಒಂಬತ್ತು ಬಗೆಯ ಅಲಂಕಾರಗಳನ್ನು ಮಾಡಲಾಗುತ್ತದೆ. ಆಶ್ವಿಜ ಶುದ್ಧ ನವಮಿ, ಆಶ್ವಿಜ ಶುದ್ಧ ಹುಣ್ಣಿಮೆ, ಮಾಘಶುದ್ಧ ನವಮಿ, ಫಾಲ್ಗುಣ ವದ್ಯ ನವಮಿ ಉತ್ಸವಗಳು ಜರುಗುತ್ತವೆ. ಕಾರ್ತಿಕ ವದ್ಯ ದ್ವಿತೀಯ ದಿವಸ ದೇವಿಯ ವನ ಭೋಜನ ಉತ್ಸವವು ದೊಡ್ಡ ಪ್ರಮಾಣದಲ್ಲಿ ಆಗುತ್ತದೆ. ಆ ನಂತರ ವೈಶಾಖದವರೆಗೆ ಪ್ರತಿ ನವಮಿಗೆ ಪಲ್ಲಕ್ಕಿ ಉತ್ಸವವು ಒಳಗಿನ ಪ್ರಾಕಾರದೊಳಗೆ ಆಗುತ್ತದೆ.

ಆಶ್ವಿಜ ಶುದ್ಧ ದಶಮಿ ಮತ್ತು ಮಾಘಶುದ್ಧ ದಶಮಿಯ ದಿವಸ ಚಂಡಿಕಾ ದೇವಿಯ ಮುಂದೆ ಮೂರು ಕೊಳಗ ಬೆಣತಿಗೆ ಅಕ್ಕಿಯ ಚರು ರಾಶಿ ಹಾಕಿ ಅದರ ಮೇಲೆ ಮೂರು ಕೊಳಗ ಅಕ್ಕಿಯ ದೊಡ್ಡ ವಡೆ ಮಾಡಿ ರಾಶಿಯ ಮೇಲಿಟ್ಟು ಅದರ ಮೇಲೆ ಕುಸುಮಾಲೆ ಹೂವಿನ ಮಾಲೆ ಹಾಕಿ ಒಂದು ಕಾಯಿ, ಒಡೆದು ಒಂದು ಕಡೆಯ ತುಂಡು ಮಾಡಿ ವಡೆಗಳ ಮೇಲೆ ಇಡುವರು. ಇನ್ನೊಂದು ಕಡೆಯಲ್ಲಿ ಎಣ್ಣೆ ಹಾಕಿ ಬತ್ತಿ ಹೊತ್ತಿಸಿ ಆರತಿ, ಪೂಜೆ ಮಾಡುವರು. ಆ ದಿವಸ ಇಲ್ಲಿ ಕೀರ್ತನೆ ಸಹ ಆಗುವುದು.

## ಕುಂಡೋದರಿ ದೇವಾಲಯ— ಅಂಕೋಲಾ

ಈ ದೇವಾಲಯವು ಅಂಕೋಲೆಯ ಬಸ್ ನಿಲ್ದಾಣದಿಂದ ಜನ್ಮಟ್ಟಿಗೆ ಹೋಗುವ ದಾರಿಯಲ್ಲಿ ಒಂದು ಫರ್ಲಾಂಗ ದೂರದಲ್ಲಿದೆ. ರಸ್ತೆಯ ಬದಿಯಲ್ಲಿದ್ದು ತುಂಬಾ ಆಕರ್ಷಿತವಾಗಿದೆ ಈ ದೇವಿಯು ಮೂಲತಃ ಗೋವಾದ ಕುಡತರಿ ಗ್ರಾಮದವಳು. 1540 ರ ಸುಮಾರಿಗೆ ಜನರು ಅಲ್ಲಿಂದ ಹೊರಟು ಉತ್ತರ ಕನ್ನಡ ಜಿಲ್ಲೆಯ ಕಡೆಗೆ ಸಾಗಿ ಬರತೊಡಗಿದರು. ಅವರು ಬರುವಾಗ ಅವರೊಡನೆ ಅವರು ನಂಬಿದ ದೇವರನ್ನೂ ಹಿಡಿದುಕೊಂಡು ಬಂದರು. ಹೀಗೆ ಗೋವಾದ ಕುಡತರಿಯಿಂದ ಕುಳಾವಿಗಳು ದೇವಿಯನ್ನು ತಂದು ಅಂಕೋಲಾದಲ್ಲಿ ಪ್ರತಿಷ್ಠಾಪಿಸಿದರೆಂದು ತಿಳಿದು ಬರುತ್ತದೆ. ಸಮುದ್ರ ಮಾರ್ಗವಾಗಿ ದೇವಿಯನ್ನು ಗೋವಾದಿಂದ ಅಂಕೋಲೆಗೆ ತರಲು 'ಖಾರ್ವಿ' ಬೆಸ್ತರು ತುಂಬಾ ಸಹಾಯ ಮಾಡಿದರೆಂದೂ ತಿಳಿದು ಬರುತ್ತದೆ.

ಈ ದೇವಾಲಯದ ಆವರಣದಲ್ಲಿ ಮಹಾಸತಿ, ಚಕ್ರಪೀಠ, ಮಾರಿಗಣ, ಕವಳನಾಥ ಸ್ತಂಭ, ಭೂತಗಣ, ಸೀಮೆಕಟ್ಟೆ, ಶಮೀವೃಕ್ಷ ಮೊದಲಾದವುಗಳಿವೆ.

ಈ ದೇವಾಲಯದಲ್ಲಿ ಹಲವು ಉತ್ಸವಗಳು ನಡೆಯುತ್ತಿದ್ದು ಆಶ್ವೀಜ ಮಾಸದಲ್ಲಿ ನವರಾತ್ರಿ ಹುಣ್ಣಿಮೆ ಉತ್ಸವಗಳು ಬಹಳ ವಿಜೃಂಭಣೆಯಿಂದ ನಡೆಯುವುದು ಕಾರ್ತಿಕದಲ್ಲಿ ಹುಣ್ಣಿಮೆ ಉತ್ಸವವು ದೇವಾಲಯದಲ್ಲಿ ಮತ್ತು ವನಭೋಜನ ಬಾಳೇಗುಳಿಯಲ್ಲಿ ನಡೆಯುವುದು. ಪುಷ್ಯದಲ್ಲಿ ಪೂರ್ಣಿಮಾ ಉತ್ಸವ, ವೈಶಾಖವದ್ಯ ಸಪ್ತಮಿಗೆ ಪ್ರತಿಷ್ಠಾ ಉತ್ಸವಗಳು ಜರಗುವುವು. ಆಶ್ವೀಜ ಹುಣ್ಣಿಮೆಯಿಂದ ವೈಶಾಖ ಹುಣ್ಣಿಮೆಯ ತನಕ ಹುಣ್ಣಿಮೆ ಪಲ್ಲಕಿ, ರಥೋತ್ಸವಗಳು ನಡೆಯುವುವು.

ಈ ದೇವಾಲಯವು ಹಲವು ಸಲ ಜೀರ್ಣೋದ್ಧಾರ ಹೊಂದಿ ಕುಳಾವಿ ಮತ್ತು ಇತರರ ಸಹಕಾರದಿಂದ ಇಂದು ಆಕರ್ಷಕ ದೇವಾಲಯಗಳಲ್ಲಿ ಒಂದಾಗಿದೆ. 1977ರಲ್ಲಿ ದೇವಾಲಯದ ಜೀರ್ಣೋದ್ಧಾರವಾಗಿ ಪುನಃ ಪ್ರತಿಷ್ಠಾ ಕಾರ್ಯಕ್ರಮ, ತಾಮ್ರ ಶಿಖರ ಪ್ರತಿಷ್ಠೆಗಳಾದವು 1982 ರಲ್ಲಿ ಸುವರ್ಣ ಶಿಖರ ಕಲಶ ಪ್ರತಿಷ್ಠಾಪನೆ ಆಯಿತು.

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾಲಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಹಣ ಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501

# ಕುಂಭಕೋಣಂ

ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳಲ್ಲಿ 'ಕುಂಭಕೋಣಮ್' ದೇವಾಲಯಗಳ ನಗರವೆಂದೇ ಪ್ರಸಿದ್ಧವಾಗಿದೆ. ಸುಮಾರು ಕ್ರಿ. ಶ. ಒಂದನೆಯ ಶತಮಾನದಿಂದಲೂ ಈ ಊರಿನ ಇತಿಹಾಸ ಬೆಳೆದು ಬಂದಿದೆ. ಏಳನೆಯ ಶತಮಾನದಲ್ಲಿ ಇದು ಚೋಳರ ರಾಜಧಾನಿಯಾಗಿತ್ತು. ಬಹು ಹಿಂದಿನಿಂದಲೂ ಈ ನಗರ ದೇವಾಲಯಗಳಿಗಾಗಿ, ರೇಷ್ಮೆ ವಸ್ತ್ರಗಳಿಗಾಗಿ, ಕಂಚಿನ ಪಾತ್ರೆಗಳಿಗಾಗಿ ಎಲ್ಲೆಡೆಗಳಲ್ಲೂ ಖ್ಯಾತಿ ಹೊಂದಿದೆ. ಕಾವೇರಿ ನದಿಯ ದಡದಲ್ಲಿರುವ ಈ ಊರು ಮದರಾಸಿನಿಂದ 313 ಕಿ. ಮೀ. ಚಿದಂಬರದಿಂದ 62 ಕಿ. ಮೀ. ಮತ್ತು ತಂಜಾವೂರಿನಿಂದ 39 ಕಿ. ಮೀ. ದೂರದಲ್ಲಿದ್ದು, ಬಸ್ಸು, ರೈಲುಗಳಿಂದ ಸುಖಕರ ಪ್ರಯಾಣದ ಮೂಲಕ ತಲುಪಬಹುದಾಗಿದೆ. ಇಲ್ಲಿಯ ಪ್ರಮುಖ ವೈಶಿಷ್ಟ್ಯವೆಂದರೆ ಶೈವ ಮತ್ತು ವೈಷ್ಣವ ದೇವಾಲಯಗಳು ಪರಸ್ಪರ ಸೌಹಾರ್ದತೆಯಿಂದ ನೆಲೆಗೊಂಡಿರುವುದು. ಕುಂಭಕೋಣಮ್ ದೈವಭಕ್ತರು ಮತ್ತು ಶಿಲ್ಪಕಲಾಸೌಂದರ್ಯ ಪ್ರಿಯರೆಲ್ಲರೂ ಒಮ್ಮೆ ಸಂದರ್ಶಿಸಲೇ ಬೇಕಾದ ತಾಣವಾಗಿದೆ.

ಕುಂಭಕೋಣಮ್‌ಗೆ ಈ ಹೆಸರು ಬಂದ ಬಗ್ಗೆ ಪುರಾಣ ಪ್ರಸಿದ್ಧವಾದ ಕತೆಯೊಂದಿದೆ. ಪೂರ್ವದಲ್ಲಿ ಬ್ರಹ್ಮ ಪ್ರಳಯಕಾಲದ ಮುನ್ನ ಈಶ್ವರನ ಬಳಿಗೆ ಬಂದು ಜಗತ್ತನ್ನು ಮತ್ತೆ ಸೃಷ್ಟಿಸಲು ಸಹಾಯಮಾಡಲು ಕೇಳಿಕೊಂಡನಂತೆ. ಆಗ ಈಶ್ವರ ಅಮೃತ ಮತ್ತು ಮಣ್ಣುಗಳನ್ನು ಒಡಗೂಡಿಸಿ ಕುಂಭವೊಂದನ್ನು ರಚಿಸಿ ಅದರಲ್ಲಿ ಸೃಷ್ಟಿಯ ಬೀಜವನ್ನೂ ಮತ್ತು ಅಮೃತವನ್ನೂ ಇರಿಸಿ ಸಂರಕ್ಷಿಸಲು ಸಲಹೆ ಕೊಟ್ಟನಂತೆ. ಬ್ರಹ್ಮ ಈ ಕುಂಭವನ್ನು ಮೇರು ಪರ್ವತದ ಶಿಖರದಲ್ಲಿಟ್ಟು ಪೂಜಿಸಿದ. ಪ್ರಳಯಕಾಲದಲ್ಲಿ ಕುಂಭ ತೇಲಿಕೊಂಡು ಕುಂಭಕೋಣ ಇರುವೆಡೆಗೆ ಬಂದು ನೆಲೆಯಾಯಿತು. ಆ ಜಾಗ ಪರಮಪವಿತ್ರನೆಂದು ಭಾವಿಸಲಾಯಿತು. ನಂತರ ಶಿವ ಕಿರಾತನ ರೂಪ ತಾಳಿ ಕುಂಭಕ್ಕೆ ಬಾಣದಿಂದ ಹೊಡೆದನಂತೆ. ಕುಂಭ ಚೂರು ಚೂರಾಯಿತು ಅಮೃತ ಚೆಲ್ಲಿ ಹರಿದು ಎರಡು ಸ್ಥಳಗಳಲ್ಲಿ ಮಡುಗಟ್ಟಿ ನಿಂತಿತು. ಒಂದು ಮಹಾಮಖಮ್ ಕೊಳವಾಯಿತು ಮತ್ತೊಂದು ಸಾರಂಗಪಾಣಿ ದೇವಾಲಯದ ಹಿಂದಿರುವ ಪೊನ್ನ ತಾಮರೈ ಕೊಳವಾಯಿತು. ಕುಂಭದ ಒಡೆದ ಚೂರುಗಳು ಬಿದ್ದ ಸ್ಥಳಗಳಲ್ಲೆಲ್ಲಾ ಒಂದೊಂದು ದೇವಾಲಯ ಅಸ್ತಿತ್ವಕ್ಕೆ ಬಂದಿತು. ಈಶ್ವರ, ಒಡೆದ ಕುಂಭದ ಮಣ್ಣಿನಿಂದ ರೂಪಿಸಿದ ಲಿಂಗವೇ ಆದಿಕುಂಭೇಶ್ವರನೆನಿಸಿತು. ಕುಂಭ ಒಡೆದ ಊರು ಕುಂಭಕೋಣವಾಯಿತು ಇದು ಕುಂಭಕೋಣದ ಸ್ಥಳ ಪುರಾಣ

ಇಲ್ಲಿ ಆಳಿದ ಚೋಳ ಮತ್ತು ನಾಯಕ ವಂಶದ ಅರಸರು ಅನೇಕ ಭವ್ಯ ದೇವಾಲಯಗಳನ್ನು ಕಟ್ಟಿಸಿದ್ದಾರೆ. ಊರನ್ನು ಸುಂದರಗೊಳಿಸಲು ಶ್ರಮಿಸಿದ್ದಾರೆ ಅಷ್ಟೇ ಇಲ್ಲ ದಕ್ಷಿಣ ದೇಶದ ಗಂಗೆಯೆನಿಸಿದ ಕಾವೇರಿಯ ಜಲರಕ್ಷೆ ಈ ಊರಿಗಿದೆ ಆದಿ ಕುಂಭೇಶ್ವರ ಮತ್ತು ನಾಗೇಶ್ವರ ದೇವಾಲಯಗಳು ಪಟ್ಟಾಭಿರಾಮಸ್ವಾಮಿ, ಸಾರಂಗಪಾಣಿ ಮತ್ತು ಚಕ್ರಪಾಣಿ ದೇವಾಲಯಗಳು, ಮಹಾಮಖಮ್ ಕೊಳ,ಇವು ಕುಂಭಕೋಣಮ್‌ನಲ್ಲಿ ಸಂದರ್ಶಿಸಲೇಬೇಕಾದ ಪವಿತ್ರಸ್ಥಾನಗಳು. ಇದಲ್ಲದೆ ಬ್ರಹ್ಮನ ದೇವಾಲಯ, ಕಂಚಿ ಕಾಮಕೋಟಿ ಪೀಠದ ಒಂದು ಮಠ ಶ್ರೀ ವಿಜಯೇಂದ್ರಸ್ವಾಮಿಗಳ ಮಠ ಇವೂ ಕುಂಭಕೋಣದಲ್ಲಿವೆ.

## ಕುಂಭೇಶ್ವರ ದೇವಸ್ಥಾನ :

ಆದಿ ಕುಂಭೇಶ್ವರ ಕುಂಭಕೋಣದ ಅಧಿದೇವತೆ. ಇಲ್ಲಿರುವ ದೇವಾಲಯಗಳಲ್ಲೆಲ್ಲ ಇದು ಅತ್ಯಂತ ಪ್ರಾಚೀನವಾದದು. ಚೋಳರಾಜನೊಬ್ಬ ಈ ದೇವಸ್ಥಾನವನ್ನು ಕಟ್ಟಿಸಿದನಂತೆ ನಾಯಕ ರಾಜರು ಮತ್ತನ್ನು ಸುಂದರಗೊಳಿಸಲು ಶ್ರಮಿಸಿದರು.

ಬಹು ವಿಸ್ತಾರವಾದ ದೇವಾಲಯದ 128 ಅಡಿ ಉನ್ನತವಾದ ಗೋಪುರ, ದೂರದಿಂದಲೇ ದೃಷ್ಟಿಗೋಚರವಾಗುತ್ತಾ ಭಕ್ತರನ್ನು ಕೈಬೀಸಿ ಕರೆಯುತ್ತದೆ. ದೇವಾಲಯದಲ್ಲಿ 4 ಪ್ರಾಕಾರಗಳಿವೆ. ಒಳಾಂಗಣದಲ್ಲಿ ಸಾಲು ಸಾಲಾಗಿ ಅಂಗಡಿಗಳಿವೆ. ಅವುಗಳನ್ನೆಲ್ಲಾ ದಾಟಿ ಮುಂದೆ ಹೋದರೆ ಗರ್ಭಗುಡಿಯ ಮುಂದೆ ಸಾಲುಗಟ್ಟಿ ನಿಂತಿರುವ ಎತ್ತರವಾದ ಕಲ್ಲಿನ ಕಂಭಗಳಿಂದ ಕೂಡಿದ ಪ್ರಾಂಗಣವಿದೆ ಇವು ಬಹು ಸುಂದರವಾದ ಕೆತ್ತನೆ ಕೆಲಸಗಳಿಂದ ಕೂಡಿವೆ. ಒಳಗಡೆ ಪ್ರವೇಶಿಸಿದರೆ ಎದುರಿಗೇ ಕಾಣುತ್ತದೆ ಕುಂಭೇಶ್ವರನ ಮೂರ್ತಿ. ಒಡೆದ ಕುಂಭದ ಮಣ್ಣಿನಿಂದ ಈಶ್ವರ ರೂಪಿಸಿದ ಈ ಲಿಂಗ ಕುಂಭಾಕಾರದಲ್ಲಿದೆ. ಆದ್ದರಿಂದಲೇ ಕುಂಭೇಶ್ವರನೆನಿಸಿದೆ ಈ ಲಿಂಗ ಕಲ್ಲಿನಿಂದ ಮಾಡಿದ್ದಲ್ಲ ಮಣ್ಣಿನಿಂದ ಮಾಡಿರುವುದರಿಂದ ಲಿಂಗಕ್ಕೆ ದ್ರವವಸ್ತುಗಳಿಂದ ಅಭಿಷೇಕ ಗೈಯ್ಯುವುದಿಲ್ಲ ಲಿಂಗದ ಕೆಳಗೆ ಕಿರಾತಮೂರ್ತಿಯೊಂದಿದ್ದು ಅದಕ್ಕೂ ಪೂಜೆ ಸಲ್ಲುತ್ತದೆ ಆ ದಿವ್ಯ ಸನ್ನಿಧಿಯಲ್ಲಿ ಮನಸ್ಸು ಮೌನವಾಗಿ ಪ್ರಣಾಮಗಳನ್ನರ್ಪಿಸುತ್ತದೆ. ಪಕ್ಕದಲ್ಲಿಯೇ ಕುಂಭೇಶ್ವರನ ಪತ್ನಿ ಮಂಗಳಾಂಬಿಕೆಯಿದ್ದಾಳೆ.

ಆಶ್ಚರ್ಯಕಾರಕವಾದ ಕೆಲವು ಶಿಲ್ಪಗಳು ಈ ದೇವಾಲಯದಲ್ಲಿವೆ. ಮೂರನೆಯ ಪ್ರಾಕಾರದಲ್ಲಿ ಆದಿ ವಿನಾಯಕನೆಂದು ಹೆಸರಾದ ಗಣೇಶನ ವಿಗ್ರಹವಿದೆ. ನವಗ್ರಹ ಮಂಟಪದಲ್ಲಿ 27 ನಕ್ಷತ್ರಗಳು, 12 ರಾಶಿಗಳನ್ನು ಒಂದೇ ಕಲ್ಲಿನಲ್ಲಿ ಕೆತ್ತಲಾಗಿದೆ. ಆರು ಭುಜ, ಆರು ತಲೆಗಳಿರುವ ಸುಬ್ರಹ್ಮಣ್ಯನ ಮೂರ್ತಿಯೊಂದಿದೆ. ಕಲ್ಲಿನಿಂದ ಮಾಡಿದ ಎರಡು ನಾದಸ್ವರಗಳಿವೆ. ಇವನ್ನು ಹಿಂದೆ ನುಡಿಸುತ್ತಿದ್ದರಂತೆ. ಈಗ ಜನ ನೋಡಲೆಂದು ಸಂರಕ್ಷಿಸಿಡಲಾಗಿದೆ. ಹಿಂದುಗಡೆ ದೊಡ್ಡ ಪುಷ್ಕರಿಣಿಯಿದೆ. ದೇವಸ್ಥಾನಕ್ಕೆ ಹೋದವರು ಇವೆಲ್ಲವನ್ನೂ ಅವಶ್ಯವಾಗಿ ನೋಡಿಬರಬೇಕು.

## ನಾಗೇಶ್ವರ ದೇವಾಲಯ :

ನಾಗೇಶ್ವರ ದೇವಸ್ಥಾನ ಹೆಸರೇ ಹೇಳುವಂತೆ ಈಶ್ವರಾಲಯ. ವಿಶಾಲವಾದ ದೇವಸ್ಥಾನ. ಬಹು ಎತ್ತರವಾದ ಗೋಪುರ ಈಗ ಈ ದೇವಸ್ಥಾನಕ್ಕೆ ಪುನರ್ನವೀಕರಣ ನಡೆಯುತ್ತಿದೆ. ಲಿಂಗದ ಮೇಲೆ ಹೆಡೆ ಬಿಚ್ಚಿ ನಿಂತೆ ಹಾವಿನ ಮೂರ್ತಿಯಿದೆ. ಪೂರ್ವದಲ್ಲಿ ಆದಿಶೇಷ ಭೂಭಾರವನ್ನು ತಡೆಯಲಾರದೆ ಈಶ್ವರನ ಬಳಬಂದು ಅಭಯವನ್ನು ಬೇಡಿದನಂತೆ. ದೇವರು ಅವನಿಗೆ ಆ ಶಕ್ತಿಯನ್ನು ಪ್ರಸಾದಿಸಿದನಂತೆ. ತನ್ನ ಕೃತಜ್ಞತೆಯ ಕುರುಹಾಗಿ ಆದಿಶೇಷ ದೇವರಿಗೆ ನೆರಳಾಗಿ ನಿಂತನಂತೆ. ಇದು ಇಲ್ಲಿಯ ಐತಿಹ್ಯ.

ಇಲ್ಲಿಯ ವಿಶೇಷವೆಂದರೆ ಚೈತ್ರಮಾಸದ 11, 12, 13 ನೆಯ ದಿವಸಗಳು ಸೂರ್ಯರಶ್ಮಿಗಳು ಗರ್ಭಗುಡಿಯನ್ನು ಪ್ರವೇಶಿಸಿ ಲಿಂಗದಮೇಲೆ ಬೀಳುತ್ತವೆ.

## ಪಟ್ಟಾಭಿರಾಮಸ್ವಾಮಿ ದೇವಸ್ಥಾನ:

ದಕ್ಷಿಣ ಭಾರತದಲ್ಲಿರುವ ಶ್ರೀರಾಮನ ದೇವಸ್ಥಾನಗಳಲ್ಲಿ ಕುಂಭಕೋಣಮ್ ನಲ್ಲಿರುವ ಪಟ್ಟಾಭಿರಾಮಸ್ವಾಮಿಯ ದೇವಸ್ಥಾನ ಬಹು ಪ್ರಸಿದ್ಧವಾದುದು. ಇಲ್ಲಿರುವುದು ರಾಮ ಪಂಚಾಯತನ. ಒಂದೇ ಸಿಂಹಾಸನದಲ್ಲಿ ವಿರಾಜಮಾನರಾಗಿರುವ ಶ್ರೀರಾಮಚಂದ್ರ ಮತ್ತು ಸೀತಾದೇವಿ ಪುರುಷ ಪ್ರಮಾಣಕ್ಕಿಂತ ಎತ್ತರವಾದ, ಕರಿಯ ಸಾಲಗ್ರಾಮದಲ್ಲಿ ರಚಿತವಾದ ವಿಗ್ರಹಗಳು. ದ್ವಿಭುಜ,

ಶ್ರೀಮತಿ ಸುಮನಾ ಬದರೀನಾಥ್

ಬಲಗೈ ವರದ ಹಸ್ತ, ಎಡಪಾದವನ್ನು ಮಡಿಸಿ ಬಲಪಾದವನ್ನು ಇಳಿಬಿಟ್ಟು ಸ್ವಾಮಿ ಕುಳಿತಿದ್ದಾನೆ. ಎಡಪಾದ ಪದ್ಮ ಪುಷ್ಪದಲ್ಲಿದೆ. ದೇವರ ಬಲ ಪಕ್ಕದಲ್ಲಿ ಲಕ್ಷ್ಮಣ ಅಂಜಲೀ ಬದ್ಧನಾಗಿ ಆಜ್ಞೆಯನ್ನು ನಿರೀಕ್ಷಿಸುತ್ತಾ ನಿಂತಿದ್ದಾನೆ. ಎದುರಿಗೆ ಭರತ ರಾಜಛತ್ರವನ್ನು ಹಿಡಿದಿದ್ದಾನೆ. ಬಲ ಪಕ್ಕದಲ್ಲಿ ನಿಂತ ಶತ್ರುಘ್ನ ಚಾಮರ ಸೇವೆಯನ್ನು ಸಲ್ಲಿಸುತ್ತಿದ್ದಾನೆ. ಎದುರಿಗೆ ಕುಳಿತ ಹನುಮಂತ ಪದ್ಮಾಸನಾಸೀನನಾಗಿ, ಒಂದು ಕೈಯಲ್ಲಿ ವೀಣೆಯನ್ನೂ, ಮತ್ತೊಂದು ಕೈಯಲ್ಲಿ ರಾಮಾಯಣವನ್ನೂ ಹಿಡಿದು ಅರ್ಧ ನಿಮೀಲಿತ ನೇತ್ರನಾಗಿ ರಾಮಾಯಣವನ್ನು ಹಾಡುತ್ತಿದ್ದಾನೆ. ದಿವ್ಯ ಭವ್ಯವಾದ ವಿಗ್ರಹಗಳು ಪ್ರಸನ್ನ ಸುಂದರವಾದ ತೇಜೋಮಯವಾದ ಮುಖಮುದ್ರೆ, ಯುಕ್ತ ಸ್ಥಳಗಳಲ್ಲಿ ಆಭರಣಗಳ ಅಲಂಕಾರ. ಉತ್ಸವ ಮೂರ್ತಿಗಳೂ ಸಹ ಬಹು ಸುಂದರವಾಗಿವೆ. ದೈವ ಸಾನ್ನಿಧ್ಯ ಭಕ್ತಿ ಭಾವ ಪ್ರಬೋಧಕವಾಗಿದೆ.

ದೇವಸ್ಥಾನದ ಸುತ್ತಲಿನ ಪ್ರಾಕಾರದಲ್ಲಿ ಅತ್ಯಂತ ಸುಂದರವಾದ ಫ್ರೆಸ್ಕೊ ಚಿತ್ರಗಳಿವೆ. ಇಡಿಯ ರಾಮಾಯಣವನ್ನು ಮೂರು ಸಾಲುಗಳಲ್ಲಿ ಕಣ್ಣಿಗೆ ಕಟ್ಟುವಂತೆ. ಹಿತವಾದ ವರ್ಣಗಳಲ್ಲಿ ಚಿತ್ರಿಸಿದ್ದಾರೆ. ಆದರೆ ಇಂದು ಅವು ಬಣ್ಣಗಳುದುರಿ ಶಿಥಿಲಗೊಳ್ಳುತ್ತಾ ಬಂದಿವೆ. ದೇವಸ್ಥಾನದ ಪ್ರವೇಶದ್ವಾರದಲ್ಲಿ ಸಾಲಾಗಿ ಕಡೆದಿರುವ ಕಂಭಗಳು ಶಿಲ್ಪಿಯ ಕಲಾಚಾತುರ್ಯಕ್ಕೆ ಸಾಕ್ಷಿಯಾಗಿ ನಿಂತಿವೆ. ದಶಾವತಾರದ ಕೆತ್ತನೆಗಳು, ದೇವಾಧಿದೇವತೆಗಳು, ಸ್ತ್ರೀ ಪುರುಷ ಮೂರ್ತಿಗಳು ಪ್ರಾಣಿವರ್ಗ ಎಲ್ಲಕ್ಕೂ ಇಲ್ಲಿ ಸ್ಥಾನವಿದೆ. ಹೀಗಾಗಿ ಈ ದೇವಸ್ಥಾನ ಸಂದರ್ಶನೀಯವಾಗಿದೆ.

## ಚಕ್ರಪಾಣಿ ದೇವಸ್ಥಾನ :

ಇದು ಪುಟ್ಟದಾದರೂ ಪ್ರಸಿದ್ಧವಾದ ಹಸ್ತ ಗುಡಿ ಕಾವೇರಿ ನದಿಗೆ ಸಮೀಪವಾಗಿದೆ. ಚಕ್ರಹಸ್ತನಾದ ನಾರಾಯಣ ಅಷ್ಟ ಭುಜ ತ್ರಿನೇತ್ರ, ಪದ್ಮಾಸನಾಸೀನನಾದ ಮೂರ್ತಿ. ಗರ್ಭಗುಡಿಗೆ ಎರಡು ಬಾಗಿಲುಗಳಿವೆ. ಉತ್ತರಾಯಣದಲ್ಲಿ ಉತ್ತರದಿಕ್ಕಿನ ಬಾಗಿಲಿನಿಂದಲೂ, ದಕ್ಷಿಣಾಯನದಲ್ಲಿ ದಕ್ಷಿಣದಿಕ್ಕಿನ ಬಾಗಿಲಿಂದಲೂ ಭಕ್ತರು ಪ್ರವೇಶಿಸುತ್ತಾರೆ. ಪ್ರಾಕಾರದಲ್ಲಿ ಪಂಚಮುಖಿ ಆಂಜನೇಯನ ಸುಂದರವಾದ ವಿಗ್ರಹವೊಂದಿದೆ (ಗರುಡ, ನಾರಸಿಂಹ, ವರಾಹ, ಹಯಗ್ರೀವ ಮತ್ತು ಹನುಮಂತರ ಐದು ಮುಖಗಳು) ಇದು ವೈಷ್ಣವರಿಗೆ ಶ್ರೇಷ್ಠವಾದ ದೇವಾಲಯ.

## ಸಾರಂಗಪಾಣಿ ದೇವಸ್ಥಾನ :

ಸಾರಂಗಪಾಣಿ ದೇವಾಲಯ ಅಪೂರ್ವ ಕಲಾ ವೈಭವವನ್ನೊಳಗೊಂಡಿದ್ದು, ವಿಷ್ಣು ಭಕ್ತರಿಗೆ ಬಹು ಪ್ರಿಯವಾದುದು ಈ ಗುಡಿ ಮೂರು ಎಕರೆಗಳಷ್ಟು ವಿಸ್ತಾರವಾದ ಜಾಗವನ್ನಾಕ್ರಮಿಸಿದೆ. ಮುಖ್ಯ ಗೋಪುರದ ಎತ್ತರ 147 ಅಡಿ. ಗರ್ಭಗುಡಿ ಮತ್ತು ಮುಖದ್ವಾರಗಳನ್ನು ರಥದ ಆಕಾರದಲ್ಲಿ ರೂಪಿಸಲಾಗಿದೆ. ಎರಡೂ ಪಾರ್ಶ್ವಗಳಲ್ಲೂ ಎರಡೆರಡು ಚಕ್ರಗಳಿವೆ. ಒಂದು ಜೊತೆ ಆನೆ ಮತ್ತು ಒಂದು ಜೊತೆ ಕುದುರೆಗಳು ಈ ರಥವನ್ನೆಳೆಯುತ್ತಿವೆ. ಅತ್ಯಂತ ಸ್ಫುಟವಾಗಿ ಕೆತ್ತಲಾಗಿದೆ. ಈ ಕೃತಿಗಳಂತೆ ರಥದ ಇತರ ಭಾಗಗಳೂ ಅಪೂರ್ವ ಕೆತ್ತನೆಗಳಿಂದ ತುಂಬಿಹೋಗಿವೆ.

ದೇವರ ಎದುರಿಗೆ ಪ್ರವೇಶದ್ವಾರವಿಲ್ಲ. ಎಡ ಬಲ ಪಾರ್ಶ್ವಗಳಲ್ಲಿ ಎರಡು ಬಾಗಿಲುಗಳಿವೆ. ಉತ್ತರಾಯಣದಲ್ಲಿ ಉತ್ತರದ್ವಾರದಿಂದಲೂ ದಕ್ಷಿಣಾಯನದಲ್ಲಿ ದಕ್ಷಿಣದಿಕ್ಕಿಗಿರುವ ಬಾಗಿಲಿನಿಂದಲೂ ಭಕ್ತರು ಪ್ರವೇಶಿಸುತ್ತಾರೆ. ಏಳು ಹೆಡೆಗಳ ಆದಿಶೇಷನ ಮೇಲೆ ಸ್ವಾಮಿ ಶಯನಿಸಿದ್ದಾನೆ. ಈ ಮೂರ್ತಿ ಶ್ರೀರಂಗದ ಶ್ರೀರಂಗನಾಥನ ಹಾಗೂ ತಿರುಪತಿಯ ವೆಂಕಟಾಚಲಪತಿಯ ಪ್ರತಿಕೃತಿ ಎನಿಸಿದೆ. ತನ್ನ ಭಕ್ತನಾದ ಹೇಮರ್ಷಿಯ ಮೊರೆಯನ್ನು ಕೇಳಿ ಶೇಷತಲ್ಪದಿಂದ ಏಳುತ್ತಿರುವ ಭಂಗಿಯಲ್ಲಿದೆ ಈ ವಿಗ್ರಹ. ಒಂದು ಕೈಯಲ್ಲಿ ಸಾರಂಗವನ್ನು ಹಿಡಿದಿದ್ದಾನೆ. ಆಂತೆಯೇ ಇವನು ಸಾರಂಗಪಾಣಿ. ಆಳ್ವಾರರು ಈ ಸುಂದರ ಮೂರ್ತಿಯನ್ನು ತಮ್ಮ ಕೃತಿಗಳಲ್ಲಿ ಬಹುವಾಗಿ ಸಂಸ್ತುತಿಸಿ 'ಅರ ಅಮುದರ್' ಎಂದು ಕರೆದಿದ್ದಾರೆ. ದೇವರು ವೈಕುಂಠದಿಂದ ರಥದಲ್ಲಿ ಇಳಿದು ಬಂದನೆಂಬ ಕಥೆಯನ್ನು ರೂಪಿಸಲೆಂದೇ ಗರ್ಭಗುಡಿ ರಥದ ಆಕಾರದಲ್ಲಿದೆ. ಪಕ್ಕದಲ್ಲಿಯೇ ಕೋಮಲವಲ್ಲಿ ದೇವಿಗಾಗಿ ಒಂದು ಗುಡಿಯಿದೆ. ಈ ದೇವಸ್ಥಾನದಲ್ಲಿರುವ ಪೊನ್ನತಾಮರೈ ಕೊಳಂ (ಚಿನ್ನದ ತಾವರೆಯ ಕೊಳಂ) ಕುಂಭ ಒಡೆದಾಗ ಅಮೃತ ಮಡುಗಟ್ಟಿನಿಂತ ಎರಡು ಸ್ಥಳಗಳಲ್ಲೊಂದು. ಈ ದೇವಸ್ಥಾನ ಶಿಲ್ಪಕಲಾಭ್ಯಾಸಿಗಳಿಗೊಂದು ಹೆಸರಾಂತ ಪಾಠಶಾಲೆಯಾಗಿದೆ.

ಇಲ್ಲಿಯ ರಥೋತ್ಸವಕ್ಕೆಂದು ಮೀಸಲಾದ ರಥದ ಸೌಂದರ್ಯ, ಭವ್ಯತೆಗಳು ಅಸ್ವಾದ್ಯಕರವಾದುವು ಮರದ ಭಿತ್ತಿಗಳ ಮೇಲೆ ವಿಷ್ಣುವಿನ ದಶಾವತಾರದ ದೃಶ್ಯಗಳನ್ನು ಬಿಡಿಸಲಾಗಿದೆ. ದಕ್ಷಿಣ ಭಾರತದಲ್ಲಿನ ದೇವಾಲಯಗಳಲ್ಲಿನ ತೇರುಗಳಲ್ಲಿ ಇದು ಅತ್ಯುತ್ತಮವಾದುವುಗಳಲ್ಲೊಂದೆಂದು ಪರಿಗಣಿತವಾಗಿದೆ. ಆಳ್ವಾರರು ಈ ದೇವರನ್ನು ಕುರಿತು ರಚಿಸಿದ ಕೃತಿಗಳನ್ನು ಇಂದಿಗೂ ದೇವ ಸನ್ನಿಧಿಯಲ್ಲಿ ಹಾಡಲಾಗುತ್ತದೆ.

ಕುಂಭಕೋಣಮ್ ನಲ್ಲಿರುವ ದೇವಸ್ಥಾನಗಳಷ್ಟೇ ಪ್ರಖ್ಯಾತವಾದುದು ಮತ್ತು ಸಂದರ್ಶನೀಯವಾದುದು 'ಮಹಾಮಖಮ್' ಕೊಳ, ಹನ್ನೆರಡು ವರ್ಷಗಳಿಗೊಮ್ಮೆ, ಗುರು ಸಿಂಹರಾಶಿಯಲ್ಲಿರುವಾಗ, ಇಲ್ಲಿ ಮಹಾ ವಿಜೃಂಭಣೆಯಿಂದ 'ಮಹಾಮಖಮ್' ಉತ್ಸವವನ್ನು ಆಚರಿಸಲಾಗುತ್ತದೆ ಈ ಉತ್ಸವ ಭಾರತದಾದ್ಯಂತ ಪ್ರಸಿದ್ಧವಾಗಿದ್ದು ದೇಶದ ಎಲ್ಲೆಡೆಗಳಿಂದ ಲಕ್ಷಾಂತರ ಜನ ಇಲ್ಲಿಗೆ ಬಂದು ಈ ಪುಣ್ಯ ತೀರ್ಥದಲ್ಲಿಯಿಂದ ಕೃತಾರ್ಥರಾಗುತ್ತಾರೆ

ಪ್ರಳಯಕಾಲದಲ್ಲಿ ಬ್ರಹ್ಮ ಪೂಜಿಸಿ ತೇಲಿಕೊಂಡು ಬಂದ ಅಮೃತದ ಕುಂಭ ಕಿರಾತಾವತಾರ ತಾಳಿದ ಶಿವನ ಬಾಣದ ಪೆಟ್ಟಿನಿಂದ ಒಡೆದಾಗ ಹೊರ ಚೆಲ್ಲಿದ ಅಮೃತ ಮಡುಗಟ್ಟಿನಿಂತ ಕೊಳವೇ ಮಹಾಮಖಮ್ ಕೊಳ. ಅಮೃತದಿಂದ ಉದ್ಭವಿಸಿದ ಈ ಕೊಳಕ್ಕೆ ಅಮೃತವಾಪಿಯೆಂದೇ ಹೆಸರಿದೆ. ಕನ್ಯಾತೀರ್ಥವೆಂಬ ಹೆಸರೂ ಇದಕ್ಕಿದೆ. ಗಂಗೆ,ಯಮುನೆ, ಸರಸ್ವತೀ ನರ್ಮದಾ ಗೋದಾವರಿ, ಪಯೋಷ್ಣೀ, ಮಹಾನದೀ, ಸರಯೂ, ಕಾವೇರಿ ಎಂಬ ಒಂಭತ್ತು ಮಹಾನದಿಗಳು, ತಮ್ಮಲ್ಲಿ ಸ್ನಾನ ಮಾಡುವ ಜನರ ಪಾಪಗಳಿಂದ ಕಲುಷಿತಗೊಂಡು, ತಮ್ಮನ್ನು ಪವಿತ್ರಗೊಳಿಸಲು ಕಾಶೀವಿಶ್ವನಾಥರನ್ನು ಬೇಡಿಕೊಂಡರಂತೆ. ಅವನು ಅವರನ್ನು ಮಹಾಮಖಮ್ ಕೊಳದಲ್ಲಿ ಸ್ನಾನಮಾಡಿ ನಿರ್ಮಲಗೊಳ್ಳಲು ಸೂಚಿಸಿದನಂತೆ. ಅದರಂತೆ ಅದರಲ್ಲಿ ಮಿಂದು ನಿರ್ಮಲಗೊಂಡರು. ಹೀಗೆ ಈ ಕೊಳಕ್ಕೆ ಕನ್ಯಾತೀರ್ಥವೆಂಬ ಹೆಸರು ಬಂದಿತಂತೆ. ಈ ಕೊಳದ ಬಳಿಯಿರುವ ಈಶ್ವರ ದೇವಾಲಯಕ್ಕೆ ಕಾಶೀ ವಿಶ್ವನಾಥನೆಂದೇ ಹೆಸರು. ಈ ಗುಡಿಯಲ್ಲಿ ಒಂಬತ್ತು ನದಿಗಳೂ ಜಲರೂಪ ಧರಿಸಿ ನಿಂತರಂತೆ.

ಮಹಾಮಖಮ್ ಕೊಳ ಕುಂಭಕೋಣಮ್‌ನ ಮಧ್ಯಭಾಗದಲ್ಲಿದ್ದು ಸುಮಾರು 6 ½ ಎಕರೆಗಳಷ್ಟು ವಿಸ್ತಾರವಾಗಿದೆ. ಕೊಳದ ಸುತ್ತಲೂ ಹದಿನಾರು ಮಂಟಪಗಳಿವೆ. ಕೆಳಗೆ ಇಳಿಯಲು ಪ್ರಶಸ್ತವಾದ ಕಲ್ಲಿನ ಮೆಟ್ಟಿಲುಗಳಿವೆ ಈಗಿರುವ ಕೊಳವನ್ನು ಹದಿನಾರನೆಯ ಶತಮಾನದಲ್ಲಿ ಗೋವಿಂದ ದೀಕ್ಷಿತರ್ ನಾಮಕ ರಾಜರ ಮಂತ್ರಿ ಕಟ್ಟಿಸಿದನಂತೆ. ಈ ಮಂಟಪಗಳನ್ನು ಮಹಾಮಖಮ್ ಉತ್ಸವದ ಸಮಯದಲ್ಲಿ ದೇವತೆಗಳನ್ನು ತಂದಿಳಿಸಲು ಉಪಯೋಗಿಸುತ್ತಾರೆ.

ಹನ್ನೆರಡು ವರ್ಷಗಳಿಗೊಮ್ಮೆ ಮಹಾಮಖಮ್ ಉತ್ಸವ ನಡೆಯುವುದು 1968 ರಲ್ಲಿ ಮತ್ತು 1980 ರಲ್ಲಿ ಈ ಉತ್ಸವಗಳು ನಡೆದಿದ್ದವು. ಅಂದು, ಗಂಗೆ, ಯಮುನೆ, ಸಿಂಧು, ಕೃಷ್ಣಾ ಕಾವೇರಿ ಮುಂತಾದ ಎಲ್ಲ ಪುಣ್ಯನದಿಗಳು. ಈ ಕೊಳದಲ್ಲಿ ಆವಿರ್ಭವಿಸುತ್ತವೆ. ಕುಂಭಕೋಣಮ್ ನಲ್ಲಿರುವ ದೇವಾಲಯಗಳಲ್ಲೆಲ್ಲ ಈ ಸಮಯದಲ್ಲಿ ಬ್ರಹ್ಮೋತ್ಸವ, ರಥೋತ್ಸವಗಳು ನಡೆಯುತ್ತವೆ. ಈ ಮಹಾಮಖಮ್ ಮೇಳದ ದಿನದಂದು ಎಲ್ಲ ದೇವಸ್ಥಾನಗಳ ಉತ್ಸವ ಮೂರ್ತಿಗಳೂ ಇಲ್ಲಿಗೆ ಆಗಮಿಸುತ್ತಾರೆ. ವಿಧ್ಯುಕ್ತ ಅರ್ಚನೆಗಳನಂತರ ಈ ದೇವತೆಗಳ ಪ್ರತೀಕಗಳಾದ ಅವರ ಆಯುಧಗಳನ್ನು ಒಟ್ಟಿಗೇ ಕೊಳದಲ್ಲಿ ಮುಳುಗಿಸಲಾಗುತ್ತದೆ. ಅದೇ ಕ್ಷಣದಲ್ಲಿ ಅಲ್ಲಿ ಸೇರಿರುವ ಲಕ್ಷಾಂತರ ಜನ ಕೊಳದಲ್ಲಿ ಮುಳುಗಿ ದೇವತೆಗಳೊಡನೆ ತಾವೂ ಸ್ನಾನ ಮಾಡಿದೆವೆಂದು ಭಾವಿಸಿ ಧನ್ಯರಾಗುತ್ತಾರೆ. ಸ್ನಾನ, ಧ್ಯಾನ, ದಾನ, ಜಪಗಳನ್ನಾಚರಿಸಿ ಕೃತಾರ್ಥರಾಗುತ್ತಾರೆ. ಆ ಸಮಯದಲ್ಲಿ ವಿಶೇಷ ರಕ್ಷಣಾ ವ್ಯವಸ್ಥೆಗಳನ್ನು ಕೈಗೊಳ್ಳಲಾಗುತ್ತದೆ. ಕೊಳದ ತಳದಲ್ಲಿರುವ ಹಳೆಯ ಮಣ್ಣನ್ನೆಲ್ಲ ತೆಗೆದು ಅರಿಂಚು ದಪ್ಪದ ಹೊರ ಮರಳನ್ನು ಹರಡುತ್ತಾರೆ. ಕೊಳದಲ್ಲಿ ಮೊಳಕಾಲವರೆಗೆ ಮಾತ್ರ ನೀರು ಬರುವಂತೆ ವ್ಯವಸ್ಥೆ ಮಾಡಲಾಗುತ್ತದೆ. ಆರೋಗ್ಯ, ರಕ್ಷಣಾ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಬಹುಜನ ಮಹಾಮಖಮ್ ಕೊಳದಲ್ಲಿ ಸ್ನಾನ ಮಾಡಿದ ನಂತರ ಸಾರಂಗಪಾಣಿ ದೇವಸ್ಥಾನದಲ್ಲಿರುವ ಪೊನ್ನತಾಮರೈ ಕೊಳದಲ್ಲಿಯೂ ಸ್ನಾನಮಾಡುತ್ತಾರೆ ಹೀಗೆ ವೈಭವದಿಂದ ಮೇಳ ಮುಕ್ತಾಯಗೊಳ್ಳುತ್ತದೆ.

ಕುಂಭಕೋಣದ ಸಮೀಪದಲ್ಲಿಯೇ ಒಪ್ಪಿಲಿಯಪ್ಪನ್ ದೇವಸ್ಥಾನ, ಸ್ವಾಮಿಮಲೈ, ಸೂರ್ಯ ದೇವಸ್ಥಾನ ಮುಂತಾದ ಪ್ರೇಕ್ಷಣೀಯ ಸ್ಥಳಗಳಿವೆ. ಚೋಳರ ರಾಜಧಾನಿಯಾಗಿದ್ದು, ಮೆರೆದ ಕುಂಭಕೋಣಮ್, ವಿವಿಧ ಸಂಸ್ಕೃತಿಗಳ ನಲಿದಾಣವಾಗಿದ್ದು, ದೈವಭಕ್ತರು, ಕಲಾಪ್ರಿಯರು ಒಮ್ಮೆ ಸಂದರ್ಶಿಸಲೇಬೇಕಾದ ಸ್ಥಳ.

★

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಹಿಂದೆ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು ––ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0-50

" " (ಕನ್ನಡ ಲಿಪಿಯಲ್ಲಿ) 0–12

ಮಕ್ಕಳಿಗಾಗಿ :

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50-00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ –ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ 1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

ಸೇಲ್ಸ್ ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

# ವಿಠಲ ದೇವರು

ಪ್ರವಾಹದ ಮೂಲವನ್ನು, ಋಷಿ ಮೂಲವನ್ನು, ದೇವ ಮೂಲವನ್ನು ಹುಡುಕುವುದು ಬಲು ಕಷ್ಟಸಾಧ್ಯವಾದ ವಿಷಯ. ಈ ವಿಚಾರವನ್ನು ಕುರಿತು ಪೂರ್ವಿಕರು ಇಂಥ ಸಾಹಸಕ್ಕೆ ಕೈಹಾಕಬೇಡಿರಿ ಎಂದು ಹೇಳುವುದೂ ಉಂಟು. ಅವರ ಈ ಅಭಿಪ್ರಾಯ ಸಾಮಾನ್ಯವಾದುದಲ್ಲ. ಏಕೆಂದರೆ ವಿಶಾಲವಾಗಿ ಹರಿಯುವ ಪ್ರವಾಹದ ಪಾತ್ರವನ್ನು ಹುಡುಕುತ್ತ ಹೋದಾಗ ಕೊನೆಗೊಮ್ಮೆ ಅದರ ಮೂಲವು ಅತಿಚಿಕ್ಕದಾಗಿ ಚಿಕಿತ್ಸಕನಿಗೆ ಅಚ್ಚರಿಯನ್ನುಂಟು ಮಾಡಬಹುದು. ಓಹೋ! ಇದರ ಮೂಲ ಇಷ್ಟೇ ಎಂದು ಭಾಸವಾಗಲೂ ಬಹುದು. ಆದುದರಿಂದಲೇ ಮೂಲಕ್ಕೆ ಕೈ ಹಾಕಬೇಡಿ ಎಂಬ ಕಿವಿ ಮಾತನ್ನು ಆ ಹಿರಿಯರು ಹೇಳಿರುವುದುಂಟು. ಆದರೆ ನಿಜವಾದ ಅಭ್ಯಾಸಿಯಾದವನಿಗೆ ಕಿರಿದಾಗಿ ಕಂಡ ಆ ಪ್ರವಾಹವು ಕೊನೆಗೊಮ್ಮೆ ಹೇಗೆ ಕೊನೆಗೊಳ್ಳುತ್ತದೆ ಎಂಬುದನ್ನು ಕಾಣಲು ಪ್ರಯತ್ನಿಸಿದಾಗ ಹಲವು ಹತ್ತು ಬಗೆಯಿಂದ ಹರಿದು ಬಂದು ಸಮುದ್ರನಾಥನನ್ನು ಕೂಡುವ ಆ ಜಲಪ್ರವಾಹವನ್ನು ಕಂಡಾಗ ಆತನಿಗೆ ವಿರಾಟ ರೂಪದ ದರ್ಶನವಾದಂತೆನಿಸುವುದು. ಆದುದರಿಂದ ಅಥದಿಂದ ಇತಿಯವರೆಗೆ ನಾವು ಆ ವಿಷಯವನ್ನರಿತುಕೊಳ್ಳಲು ಏಕೋಭಾವದಿಂದ ಪ್ರಯತ್ನಿಸಿದಾಗ ಮಾತ್ರ ಆದಿ ಅಂತ್ಯಗಳ ಮೂಲವನ್ನು ಗುರುತಿಸಿದಂತಾಗುವುದು. ಈ ಮಾತು ಕೇವಲ ಒಂದು ಪ್ರವಾಹಕ್ಕೆ ಮಾತ್ರ ಸೀಮಿತ ಎಂದೇನಲ್ಲ. ದೇವತಾ ಮೂಲವೂ ಸಹ ಇಂಥ ಅನುಭವವನ್ನೇ ಒದಗಿಸುವುದರಲ್ಲಿ ಸಂದೇಹವಿಲ್ಲ.

ದೇವತ್ವದ ಶೋಧನೆಯ ಮಾರ್ಗವೇ ಬೇರೆ ಈ ಶೋಧನೆಯಲ್ಲಿ ನಿರತನಾದವನಿಗೆ ಇಲ್ಲವೇ ಸಾಧಕನಿಗೆ ಸಮ್ಯಕ್ ಜ್ಞಾನದ ಪರಿಪೂರ್ಣ ಅನುಭವವಿರುವುದು ಅತ್ಯವಶ್ಯಕ, ಆದುದರಿಂದ ಇಂಥ ಶೋಧನೆಯನ್ನು ಅಂತರ್ಮುಖಿ ಎಂದು ಕರೆಯುವುದುಂಟು. ಅದರಂತೆ ಇನ್ನೊಂದು ಬಗೆಯ ಶೋಧನಾ ಕಾರ್ಯವನ್ನು ಬಹಿರ್ಮುಖಿ ಎಂದು ಗುರುತಿಸುವುದುಂಟು. ಒಂದು ದಾರಿಯು ಶ್ರದ್ಧಾಯುಕ್ತವೆನಿಸಿಕೊಂಡರೆ ಇನ್ನೊಂದು ಮಾರ್ಗವು ಶೋಧನೆಗೆ ಪೋಷಕ ಮಾರ್ಗ ಎಂದೆನಿಸಿಕೊಳ್ಳುವುದು ಇಂದು ಭಕ್ತಿಮಾರ್ಗಾವಲಂಬಿಗಳಿಗೆ ಕೇಂದ್ರವೆನಿಸಿಕೊಳ್ಳುವ ವಿಠಲನ ವಿಚಾರವೂ ಸಹ ಇದೇ ರೀತಿಯಾಗಿದೆ. ಈ ದೇವನ ವಿಚಾರದಲ್ಲಿ ಭಕ್ತಿ ವಿಶ್ವಾಸ ಗಾಢವಾದ ನಂಬಿಕೆಯುಳ್ಳ ಜನ ಸಮೂಹ ಇಷ್ಟು ಎಂದು ಗುರುತಿಸಲು ಸಾಧ್ಯವಿಲ್ಲ. ಈ ಮಹಾನುಭಾವ ವಿಠಲನು ಅನಾದಿಯೂ ಹಾಗೂ ಅನಂತರೂಪ ಉಳ್ಳವನೆಂದೂ ಕರೆಸಿಕೊಳ್ಳುತ್ತಾನೆ. ಏಕೆಂದರೆ, ಭಕ್ತನ ಭಾವನೆಗೆ ಮಿಲುಕದ ಹೃದ್ಗತವಾಗಿ ಲಾಸ್ಯವಾಡುತ್ತಿರುವ ಆತನ ಯಾವುದೇ ರೂಪದ ಪ್ರತಿಬಿಂಬವು ಅನಾದಿಯಾಗಿ ಅನಂತವಾಗಿಯೇ ತೋರುತ್ತದೆ. ಈ ವಿಷಯದಲ್ಲಿ ಭಕ್ತನ ಹೃದಯ ಪರಿಪಕ್ವತೆಯು ಅತಿ ಮುಖ್ಯವಾದ ಕೇಂದ್ರಬಿಂದುವೆನಿಸುತ್ತದೆ. ಈ ನಿಮಿತ್ತವಾಗಿಯೇ ಭಕ್ತರ ದೃಷ್ಟಿಯಲ್ಲಿ ನಮ್ಮ ವಿಠಲನು ವಿಶ್ವಮಾನ್ಯನಾಗಿದ್ದಾನೆ ಆತನು ಯುಗಯುಗಗಳನ್ನು ಸೃಷ್ಟಿಸಿದ ಮಹಾನುಭಾವ ಎಂಬ ನಂಬಿಕೆಯುಳ್ಳವನಾಗಿದ್ದಾನೆ. ಈ ನಿಮಿತ್ತವಾಗಿಯೇ ಮಹಾರಾಷ್ಟ್ರದ ಸಂತಶ್ರೇಷ್ಠರಲ್ಲೊಬ್ಬರಾದ ಸಂತ ತುಕಾರಾಮರು "ಯುಗೇ ಅಠ್ಠಾವೀಸ, ಉಭಾ ಹೃಷೀಕೇಸಪುಂಡರೀಕ" ಎಂದು ಆ ಮಹಾನುಭಾವನನ್ನು ಸ್ತೋತ್ರಮಾಡುತ್ತಾರೆ. ಈ ಸ್ತೋತ್ರವು ಅಥವಾ ವಿಠಲನ ಹೊಗಳಿಕೆಯು ಕೇವಲ ತುಕಾರಾಮರಿಗೆ ಸೀಮಿತವಾದುದೇನಲ್ಲ. ಮಹಾರಾಷ್ಟ್ರದ ಸಂತ ಶಿರೋಮಣಿಗಳಂತೆ ಕನ್ನಡ ನಾಡಿನ ಹರಿದಾಸ ಶ್ರೇಷ್ಠರೂ ಸಹ ಈ ದೇವನನ್ನು "ಕಟಿಯಲಿ ಕರವಿಟ್ಟನೊ ಪಂಢರಿರಾಯ" ಎಂದು ಪರಮ ಭಕ್ತಿಯಿಂದ ಮೈಮರೆತು ಅನ್ಯೋನ್ಯಾಶ್ರಯವೆಂಬಂತೆ ಆತನ ಸನ್ನಿಧಿಯಲ್ಲಿ ಭಕ್ತಿ ಭಾವದಿಂದ ಹಾಡಿ ಕುಣಿದು ನಲಿದು, ವರ್ತಿಸಿ ಲೋಕೋದ್ಧಾರಕ್ಕಾಗಿ, ತಮ್ಮ ಮುಂದಿನ ಸಂತಾನರಿಗೆ ಮಾರ್ಗದರ್ಶನವನ್ನೀಯುವುದಕ್ಕಾಗಿ, ಅಗಾಧವಾದ ಸಾಹಿತ್ಯದ ರಾಶಿಯನ್ನೇ ನಮಗಿತ್ತು ಹೋಗಿದ್ದಾರೆ.

ಈ ವಿಠಲನಿಗೆ ವೈಷ್ಣವೀಕರಣಗೊಳಿಸುವುದೇ ಸಂತ ಧರ್ಮದ ಅಥವಾ ಸಂತ ಕುಟುಂಬಗಳ ಪ್ರಕ್ರಿಯೆ ಎಂದು ಕೆಲವರ ಭಾವನೆಯಾಗಿರಬಹುದು. ಈ ದೇವನು ತನ್ನೆರಡೂ ಕೈಗಳನ್ನು ಸೊಂಟದ ಮೇಲಿಟ್ಟುಕೊಂಡು ಇಟ್ಟಿಗೆಯ ಮೇಲೆ ನಿಂತ ಕಾರಣ ಆತನು ವಿಷ್ಣು ಎಂದೇನಲ್ಲ. ಯಾಕೆಂದರೆ, ಆತನ ಈ ರೂಪವು ಇನ್ನುಳಿದ ರೂಪಗಳಿಗಿಂತ ತೀರ ಭಿನ್ನವಾದುದು, ತಿರುಪತಿಯಲ್ಲಿರುವ ಶ್ರೀನಿವಾಸನಂತೆ ಪಂಢರಪುರದ ವಿಠಲನೂ ಸಹ ಲೋಕಮಾನಸ ದೈವವೆಂದು ಭಾರತೀಯ ಭಾವುಕರಿಂದ ಪೂಜೆಯನ್ನು ಸ್ವೀಕರಿಸುತ್ತಾ ಬಂದಿರುವುದುಂಟು.

ಈ ನಿಮಿತ್ತವಾಗಿಯೇ ಮಹಾರಾಷ್ಟ್ರದ ಸಂತರೂ ವಿಷ್ಣುವಿನ ರೂಪವೆನಿಸಿಕೊಂಡ ಈತನು

ಶ್ರೀ ಆದ್ಯರಾಮಾಚಾರ್ಯ

ಕೇಶವಾದಿ ಇಪ್ಪತ್ತನಾಲ್ಕು ರೂಪಗಳಿಗಿಂತ ತೀರ ಭಿನ್ನನಾಗಿದ್ದಾನೆ– ಎಂದಿದ್ದಾರೆ, ಅವರು "ಚೋವಿಸವೇಗಳಾ" ಅಂದರೆ ಈ ಇಪ್ಪತ್ತನಾಲ್ಕಕ್ಕಿಂತಲೂ ನೀನು ಮಿಗಿಲಾದವನು ಎಂದಿದ್ದಾರೆ. ಹಾಗಾದರೆ ಈ ಮಾತಿನಲ್ಲಿ ಯಾವುದೋ ಗುಹ್ಯವಾದ ಅರ್ಥವಿದೆ ಎಂದು ಹೇಳದಂತಾಯಿತು. ವಿಷ್ಣುವಿನ ಹತ್ತು ಅವತಾರಗಳನ್ನು ದಶಾವತಾರಗಳೆಂದೂ, ಅನಂತರ ಕೇಶವಾದಿ ಇಪ್ಪತ್ತನಾಲ್ಕು ರೂಪಗಳನ್ನು ಕುರಿತು ಭಾರತೀಯ ಪುರಾಣ ಸಾಹಿತ್ಯದಲ್ಲಿ ಸಾಕಷ್ಟು ವಿವರಣೆಗಳು ದೊರೆಯುತ್ತವೆ. ಅಲ್ಲದೆ ಮತ್ಸ್ಯ, ಕೂರ್ಮ, ವರಾಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ– ಇವುಗಳ ರೂಪ ಹಾಗೂ ಲಕ್ಷಣಗಳನ್ನು ಕುರಿತು ಅನೇಕ ಆಧಾರಗಳು ಪುರಾಣಗಳಲ್ಲಿ ಉಪಲಬ್ಧವಾಗಿದ್ದು, ಶ್ರೀಮದ್ಭಾಗವತದ ಎರಡನೆಯ ಸ್ಕಂಧ ಏಳನೆಯ ಅಧ್ಯಾಯದಲ್ಲಂತೂ ಬಹು ಸೊಗಸಾಗಿ ಈ ಇಪ್ಪತ್ತನಾಲ್ಕು ರೂಪಗಳ ವರ್ಣನೆ ಮಾಡಿರುವುದನ್ನು ಕಾಣಬಹುದಾಗಿದೆ. ಈ ಇಪ್ಪತ್ತನಾಲ್ಕು ರೂಪಗಳೊಂದಿಗೆ ಸುಯಜ್ಞ, ಕಪಿಲ, ದತ್ತ, ಧನ್ವಂತರಿ, ಸನಕ, ಸನಾತನ, ಸನಂದನ, ಸನತ್ಕುಮಾರ, ನರ ನಾರಾಯಣ, ವೇನಪುತ್ರ, ಋಷಭ, ಹಯಗ್ರೀವ, ಹಂಸ– ಹೀಗೆ ಬೇರೆ ಬೇರೆ ಹದಿನಾಲ್ಕು ರೂಪಗಳ ವರ್ಣನೆ ಮಾಡಿರುವುದನ್ನು ನಾವು ಪುರಾಣಗಳ ಅಭ್ಯಾಸದಿಂದ ತಿಳಿಯಬಹುದಾಗಿದೆ.

ಶ್ರೀಮದ್ ಭಾಗವತವಂತೂ ಭಾರತೀಯರಿಗೆ ಪರಮಾದರಣೀಯವಾದ, ಭಕ್ತಿಪ್ರಧಾನವಾದ ಪುರಾಣವೆನಿಸಿದೆ. ಭಗವದ್ಗೀತೆ, ಹಾಗೂ ಭಾಗವತ ಗ್ರಂಥಗಳು ಭಾವುಕರ ಎರಡು ಕಣ್ಣುಗಳಾಗಿ ಪರಿಣಮಿಸಿವೆ, ಯಾಕೆಂದರೆ, ಈ ಗ್ರಂಥಗಳಲ್ಲಿ ಎಲ್ಲರಿಗೂ ತಿಳಿಯುವಂತಹ ಶೈಲಿಯಲ್ಲಿ ಭಗವತ್ ತತ್ವಗಳ ವಿರಾಟರೂಪವು ಸಹಜವಾದರೀತಿಯಲ್ಲಿ ಗೋಚರಿಸುವಂತಾಗಿದೆ ವಿಠಲನ ಭಕ್ತರೆನಿಸಿದ ಸಂತರ ದೃಷ್ಟಿಯಲ್ಲಿ ಅವರ ಆರಾಧ್ಯದೈವನಾದ ಈ ದೇವನು ಈ ಎರಡೂ ಗ್ರಂಥಗಳಲ್ಲಿ ವಿವರಿಸಲ್ಪಟ್ಟ, ವರ್ಣನೆಗಳಿಗಿಂತ ತೀರಾ ಭಿನ್ನವಾಗಿ ಕಾಣಿಸಿಕೊಂಡಿದ್ದಾನೆ ಈ ನಿಮಿತ್ತವಾಗಿಯೇ ಆ ದೇವನನ್ನು 'ಚೋವಿಸಾವೇಗಳಾ'–ಎಂದರೆ ಕೇಶವಾದಿ ಇಪ್ಪತ್ನಾಲ್ಕು ರೂಪಗಳಿಗಿಂತ ಮಿಗಿಲಾದವನೆಂದು ಭಾವಿಸಿ, ಆತನ ಲೀಲಾವಿನೋದಗಳನ್ನು ಕೊಂಡಾಡಲು ಯತ್ನಿಸಿದ್ದಾರೆ. ನಾವು ಯಾವ ದೇವನ ರೂಪವನ್ನು ಕಂಡರೋ, ಆ ಮಹಾನು

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳ್ಳ ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಎ. ಶಶಿಕಾಂತ್
1949, ಸಾಲಿಗಲ್ಲಿ
ಚಿಕ್ಕೋಡಿ–591201

ಎಸ್. ವಿ. ಶೆಟ್ಟಿಗಾರ್
ನ್ಯೂಸ್ ಏಜಂಟ್
ಸಿದ್ಧಿಕಟ್ಟೆ, ಬಂಟ್ವಾಳ ತಾ॥
ದ. ಕನ್ನಡ

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕಬಳ್ಳಾಪುರ

ವೆಂಕಟೇಶ ಶಿವಾಜಿ ಝಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ಆರ್.ಜೆ ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಪಿ.ಎಸ್. ನಾಗರತ್ನಮ್ಮ
ಸಪ್ತಗಿರಿ ಏಜಂಟ್
837, ಪಿ.ಎಸ್.ಕೆ. ರಸ್ತೆ
ಬಂಗಾರಪೇಟೆ

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಜೆ.ಎಸ್. ರಾಮಮೂರ್ತಿ
C/O ಜೆ.ಎಸ್. ಪಾರ್ಥಸಾರಥಿ
ಕಠಾರಿ ಪಾಳ್ಯ, ಕೋಲಾರ

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟ್ಯಾಂಡ್‌ರೋಡ್
ಗಂಗಾವತಿ.

ಎಸ್. ಜಯರಾಂ
731, 1 ಕ್ರಾಸ್ 2 ಮೇನ್
ಎಚ್ ಎ. ಎಲ್. 2 ಸ್ಟೇಜ್
ಬೆಂಗಳೂರು–38

ಬಿ. ಆರ್. ವೆಂಕಟೇಶ ಪ್ರಸಾದ್
929, (ಹೊಸ ನಂ–4) 3 ನೇ ಮುಖ್ಯರಸ್ತೆ
"C" E–B ಬ್ಲಾಕ್, 2 ಸ್ಟೇಜ್,
ರಾಜಾಜಿನಗರ, ಬೆಂಗಳೂರು–10.

ಬಿ. ನಾಗರಾಜ್
1418 ಕೆ. ಟಿ. ರಸ್ತೆ
ಕೋಟೆ, ಚೆನ್ನಪಟ್ಟಣ

ಶಂಕರಪ್ಪ
ಫೋಟೋಗ್ರಾಫರ್
6 ಕ್ರಾಸ್, ಕೆ. ಟಿ. ಜೆ. ನಗರ
ಉರ್ದುಶಾಲೆಯಬಳಿ
ದಾವಣಗೆರೆ

ಎಸ್. ಶ್ರೀನಿವಾಸ ತಂತ್ರಿ
ಶರಾವತಿ ಹಂಚಿನ ಕಾರ್ಖಾನೆ
ಮಾವಿನಕುರ್ವೆ
ಹೊನ್ನಾವರ ತಾಲ್ಲೂಕು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಅತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

ಭಾವನು ಕನ್ನಡಿಗನಾಗಿದ್ದಾನೆ ಎಂದು ಹೇಳುವುದಕ್ಕಾಗಿಯೇ ತಮ್ಮ ಅಭಂಗಗಳಲ್ಲಿ ಬಹು ಭಕ್ತಿಯಿಂದ ಕಾನಡಾ ಎಂಬ ಶಬ್ದ ಪ್ರಯೋಗವನ್ನು ಮಾಡಿದ್ದಾರೆ. ಈ ಮಾತಿಗೆ ಸಾಕ್ಷಿಯಾಗಿ ಜ್ಞಾನದೇವರಿಂದ ರಚಿತವಾದ ಪದ್ಯದ ಒಂದು ಭಾಗವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

"ಕಾನಡಾ ಹೋ ವಿಠ್ಠಲೂ ಕರ್ನಾಟಕೂ,
ಏಣೇ ಮಜ್ ಲಾವಿಲೇ ವೇಧಿ ॥

ಈ ಪದ್ಯದಲ್ಲಿ ಕಾನಡಾ ಹಾಗೂ ಕರ್ನಾಟಕ ಎಂಬ ಶಬ್ದಗಳು. ಭಾಷಾವಾಚಕ ಹಾಗೂ ಪ್ರದೇಶವಾಚಕ ಶಬ್ದಗಳೆಂಬ ಮಾತು ನಾವು ಅಲ್ಲಗಳೆಯುವಂತಿಲ್ಲ. ಅಷ್ಟೇ ಅಲ್ಲದೆ ಕೇವಲ ಜ್ಞಾನದೇವನಿಂದ ಮಾತ್ರ ಈ ಶಬ್ದಗಳು ಅಭಂಗದಲ್ಲಿ ಕಂಡಿವೆ ಎಂದು ಹೇಳುವಂತಿಲ್ಲ. ಜ್ಞಾನದೇವನಿಗಿಂತ ಅನಂತರದಲ್ಲಿ ಬಂದ ಸಂತ ಏಕನಾಥರೂ ಸಹ ತಮ್ಮ ಒಂದು ಕೃತಿಯಲ್ಲಿ ಕಾನಡಾ ಎಂಬ ಶಬ್ದಪ್ರಯೋಗವನ್ನು ಮಾಡಿದ್ದಾರೆ. ಇದಲ್ಲದೆ ಕನ್ನಡ ಭಾಷೆಗೆ ಸಂಬಂಧಿಸಿದ ದೇವಕಾನಡೆ, ತೀರ್ಥಕಾನಡೆ, ಕ್ಷೇತ್ರಕಾನಡೆ, ಎಂಬ ಪದಗಳನ್ನು ಅಭಂಗಗಳಲ್ಲಿ ಕಾಣಬಹುದಾಗಿದೆ. ಹೀಗೆ ಮಹಾರಾಷ್ಟ್ರದ ಅನೇಕ ಸಂತರು ವಿಠಲನ ಪ್ರಾದೇಶಿಕ ವ್ಯಾಪ್ತಿಯೊಂದಿಗೆ ಭಾಷೆಯ ಸಾಂಗತ್ಯವನ್ನು ಸಹ ಯಾವುದೇ ತರಹದ ಭೇದಭಾವಗಳಿಗೆ ಅವಕಾಶ ನೀಡದಂತೆ ವರ್ಣನೆ ಮಾಡಿರುವ ಸಾಹಿತ್ಯವು ಜನಜೀವನದಲ್ಲಿಯ ಸಾಮರಸ್ಯಭಾವದ ಬಹು ದೊಡ್ಡ ಉದಾಹರಣೆಗಳಾಗಿ, ದೇಶ ಭಾಷಾತೀತಗಳಾಗಿ, ಕಾಲಾತೀತವಾಗಿ ಭಕ್ತರ ಹೃದಯಗಳನ್ನು ಒಂದುಗೂಡಿಸುವ ಸೋಪಾನಗಳಾಗಿ ತೋರಿ ಬರುತ್ತವೆ. ಇಂದು ಇಂತಹ ಸಾಮರಸ್ಯಭಾವದ ಸಾಹಿತ್ಯವನ್ನು ಸರಿಯಾದ ರೀತಿಯಲ್ಲಿ ಅಭ್ಯಾಸ ಮಾಡಿ ಜನಸಾಮಾನ್ಯರ ಕೈಯಲ್ಲಿ ಆ ಜ್ಞಾನಜ್ಯೋತಿಯನ್ನು ಒಪ್ಪಿಸುವ ಕಾರ್ಯವನ್ನು ತರುಣ ಅಭ್ಯಾಸಿಗರು ಮಾಡಬೇಕಾದ ಕಾಲವೆನಿಸಿದೆ. ಯಾಕೆಂದರೆ ಇತ್ತೀಚೆಗೆ ಮಹಾರಾಷ್ಟ್ರದ ಕೆಲವು ಸಾಹಿತಿಗಳು ಕಾನಡಾ ಮತ್ತು ಕರ್ನಾಟಕ ಈ ಶಬ್ದಗಳಿಗೆ ತಮ್ಮದೇ ಆದ ವಿಚಾರ ಸರಣಿಯಲ್ಲಿ ಅರ್ಥಮಾಡಲು ಹೊರಟಿದ್ದಾರೆ. ಕಾನಡಾ ಎಂದರೆ ಅಗಮ್ಯನೆಂದೂ ಕರ್ನಾಟಕ ಎಂದರೆ ಆತನ ಲೀಲಾ ವಿನೋದವೆಂದೂ, ಅವರು ಅರ್ಥವನ್ನು ಮಾಡುತ್ತಿದ್ದಾರೆ. ಈ ಪ್ರಯತ್ನವನ್ನು ನೋಡಿದಾಗ ಹೇಗಾದರೂ ಮಾಡಿ ರೂಢಮೂಲವಾಗಿ ಪರಂಪರಾಗತವಾಗಿ ಬಂದ ಸದ್ಭಾವನೆಗಳ ಮೇಲೆ ವಿಪರೀತ ಅರ್ಥಗಳ ಹೊರೆ ಹಾಕಲು ಪ್ರಯತ್ನಿಸತೊಡಗಿದಂತೆನಿಸುತ್ತದೆ. ಒಂದು ರೀತಿಯಲ್ಲಿ ಈ ಪ್ರಯತ್ನ ವ್ಯರ್ಥ ಎಂದು ಹೇಳಿದರೆ ತಪ್ಪಾಗಲಾರದು. ವಿಠಲನಿಗೆ ಯಾವ ನೆಲದಲ್ಲಿ ವೈಶಿಷ್ಟ್ಯಪೂರ್ಣ ಚಾರಿತ್ರ್ಯವು ಕಾಣಿಸಿಕೊಳ್ಳುವಂತಾಯಿತೋ ಆ ನೆಲವು ಅಥವಾ ಆ ಕ್ಷೇತ್ರವು ಇಂದಿಗೂ ಮಹಾರಾಷ್ಟ್ರ ಹಾಗೂ ಕರ್ನಾಟಕದ ಗಡಿ ಭಾಗವೆಂದು ಗುರುತಿಸಲಾಗುತ್ತಿದೆ. ಈ ಪಂಢರಪುರ ಕ್ಷೇತ್ರದ ಮೊದಲಿನ ಹೆಸರು 'ಪಂಢರಗೆ'–ಪಾಂಡುರಂಗ ಎಂಬುದಾಗಿತ್ತು. ಈ ಮಾತಿಗೆ ಸಾಕ್ಷಿಯಾಗಿ ಶಾಸನಗಳೇ ಆಧಾರವೆನಿಸುತ್ತವೆ.

ವಿಷ್ಣುವಿನ ರೂಪವೇ ವಿಠಲ ಎಂಬುದಾಗಿ ಸಂತರು ಹಾಗೂ ಹರಿದಾಸರು ತಮ್ಮ ಕೃತಿಗಳಲ್ಲಿ ಸ್ಪಷ್ಟ ರೀತಿಯಲ್ಲಿ ಸಾರಿ ಹೇಳಿದ್ದಾರೆ. ಇಷ್ಟಾದರೂ ಸಹ ಆ ದೇವನನ್ನು ಕೆಲವರು ದಿಗಂಬರನೆಂದೂ ವಾದಿಸುವುದುಂಟು. ಈ ಮಾತಿಗೆ ಅವರು ಸಂತರು ಬಳಸಿದ ಶಬ್ದಗಳನ್ನೇ ಆಧಾರವಾಗಿ ತೋರಿಸುತ್ತಾರೆ, ಸಂತ ನಾಮದೇವನಿಂದ ರಚಿತವಾದ ಅಭಂಗದಲ್ಲಿ ಈ ದೇವನು ತನ್ನ ಪೀತಾಂಬರವನ್ನು ಕಳಚಿ ಹಾಕಿ ಧಾವಿಸಿ ಬಂದು ಇಟ್ಟಿಗೆ ಮೇಲೆ ನಿಂತಿದ್ದಾನೆ, ದಿಗಂಬರನಾಗಿದ್ದಾನೆ–ಎಂದು ವರ್ಣಿಸಿದ್ದಾರೆ ಏಕನಾಥರೂ ಸಹ ಈತನು ಬಾಲ ದಿಗಂಬರನಾಗಿದ್ದಾನೆ ಎಂದು ಕೊಂಡಾಡಿದ್ದಾರೆ. ಆದುದರಿಂದ ಇದು ವಿಷ್ಣುವಿನ ವಿಗ್ರಹವಲ್ಲ, ದಿಗಂಬರನ ಮೂರ್ತಿ ಎಂಬುದು ಅವರ ವಾದವಾಗಿದೆ. ಯಾವುದೇ ಶಬ್ದದ ಅರ್ಥವನ್ನು ಕುರಿತು ವಿವೇಚಿಸತೊಡಗಿದಾಗ ರಚಿತವಾದ ಪದ್ಯದಲ್ಲಿರುವ ಹಿನ್ನೆಲೆ ಹಾಗೂ ಮುನ್ನೆಲೆಗಳಲ್ಲಿ ಬಳಸಿದ ಶಬ್ದ ಹಾಗೂ ಅವುಗಳ ಹಿಂದಿರುವ ಅಂತರಾರ್ಥ ಇವುಗಳನ್ನು ಸರಿಯಾಗಿ ತೂಗಿನೋಡಿ ಅರ್ಥಮಾಡಿದರೆ ಮಾತ್ರ ಆ ಪ್ರಯತ್ನಕ್ಕೆ ಸಾರ್ಥಕತೆಯು ಲಭಿಸುತ್ತದೆ. ನಮ್ಮ ಹರಿದಾಸರಿಗಾಗಲಿ ಅಥವಾ ಸಂತರಿಗಾಗಲಿ ಈ ವಿಠಲನು ಯಶೋದಾನಂದನನಾಗಿ ಮುದ್ದು ಮಗುವಾಗಿ, ಗೋಪಾಲಬಾಲನಾಗಿ ಕಂಡಿದ್ದಾನೆ. ಆ ಬಾಲ ರೂಪವನ್ನು ವರ್ಣಿಸುವಾಗ ದಿಗಂಬರ ಶಬ್ದವು ಆ ರೂಪಕ್ಕೆ ಪೂರಕವಾದ, ಅಷ್ಟೆ, ಗುಹ್ಯವಾದ ಅರ್ಥವನ್ನು ಸೂಚಿಸುತ್ತದೆ. ಪಾಂಡುರಂಗ ಮಹಾತ್ಮೆ ಎಂಬ ಗ್ರಂಥವನ್ನು ಅಮೂಲಾಗ್ರವಾಗಿ ಅಭ್ಯಾಸಮಾಡಿದಾಗ ಶ್ರೀಕೃಷ್ಣನು ರಾಧೆಯಲ್ಲಿ ಹೆಚ್ಚಿನ ಅನುರಾಗವನ್ನು ತೋರಿದ ನಿಮಿತ್ತವಾಗಿ ಕುಪಿತಳಾಗಿ ರುಕ್ಮಿಣೀ ದೇವಿಯು ಭೀಮಾತೀರದಲ್ಲಿರುವ ದಂಡಿಯ ವನಕ್ಕೆ ಬಂದು ಕುಳಿತುಕೊಂಡಳೆಂದೂ, ಆಗ ಶ್ರೀಕೃಷ್ಣನು ಆಕೆಯ ಕೋಪವನ್ನು ನಿವಾರಿಸಲು ಗೋವುಗಳ ಹಿಂಡಿನೊಂದಿಗೆ ಗೋಪಾಲಕರನ್ನು ಕರೆದುಕೊಂಡು ಬಂದನೆಂದೂ ಹೇಳಿ ಈ ಮಾತಿಗೆ ಭೀಮಾತೀರದಲ್ಲಿರುವ ಗೋಪಾಲಪುರ ಎಂಬ ಸ್ಥಳದ ವರ್ಣನೆಯನ್ನು ಮಾಡಿದ್ದಾರೆ. ಈ ಮಾತು ಪದ್ಮಪುರಾಣದಲ್ಲಿಯೂ ಕಾಣಬಹುದಾಗಿದೆ. ಇಂಥದೇ ಒಂದು ಸಂದರ್ಭವನ್ನು ವೆಂಕಟಾಚಲ ಮಹಾತ್ಮೆ ಎಂಬ ಗ್ರಂಥದಲ್ಲಿಯೂ ನಾವು ಕಾಣುತ್ತೇವೆ. ವಿಷ್ಣು ಪತ್ನಿಯಾದ ಲಕ್ಷ್ಮಿಯು ಕುಪಿತಳಾಗಿ ಕರವೀರಪುರಕ್ಕೆ ಬಂದು ವಾಸಮಾಡಿದಳೆಂದೂ, ಶ್ರೀನಿವಾಸನು ವೃಷಭಾಚಲದಲ್ಲಿ ಬಂದು ನಿಂತನೆಂದೂ ವರ್ಣಿತವಾಗಿದೆ. ಅಲ್ಲದೆ ಸ್ಕಾಂದಪುರಾಣದಲ್ಲಿ ಪುಂಡರೀಕನಿಗೆ ಈ ದೇವನು ಬಾಲ ಗೋಪಾಲನಾಗಿಯೇ ದರ್ಶನವನ್ನಿತ್ತ ಎಂಬುದಾಗಿ ವರ್ಣಿತವಾಗಿದೆ. ಪುರಾಣೋಕ್ತವಾದ ಈ ವಿಷಯಗಳೆಲ್ಲ ಪಂಢರಪುರದ ಸಾಂಸ್ಕೃತಿಕ ಅಭ್ಯಾಸಕ್ಕೆ ಪೂರಕವಾದ ವಿಷಯಗಳೆನಿಸುತ್ತವೆ. ಆದುದರಿಂದ ಈ ಕ್ಷೇತ್ರನಿವಾಸಿಯಾದ ಪಾಂಡುರಂಗನಿಗೂ ಹಾಗೂ ಕನ್ನಡ ನಾಡಿನ ಹರಿದಾಸ ಪರಂಪರೆಗೂ ಬಹು ದೊಡ್ಡ ಸಂಬಂಧವಿದೆ ಎಂಬ ಮಾತನ್ನು ಅರಿತುಕೊಳ್ಳುವುದು ಅಗತ್ಯದ ವಿಷಯವೆನಿಸುತ್ತದೆ. ಈ ದೇವನು ಕರ್ನಾಟಕ ಹಾಗೂ ಮಹಾರಾಷ್ಟ್ರ ಈ ಪ್ರಾಂತಗಳಲ್ಲಿ ವಾಸಿಸುವ ಭಕ್ತರ ಮನೋಭಾವವನ್ನು ಒಂದುಗೂಡಿಸಲು ಧಾವುಕತೆಯ ಮಹಾಸೇತುವೆಯಾಗಿ ಪರಿಣಮಿಸಿದ್ದಾನೆ. ಈ ಮಾತನ್ನು ಅರಿತುಕೊಳ್ಳುವುದಕ್ಕಾಗಿಯೇ ಮುಂದಿನ ಅಭ್ಯಾಸ ಮಾಡುವುದು ವಿಹಿತವೆನಿಸುತ್ತದೆ.

*

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಶರಣರು ದಾಸರು ಹೊಂದಿದ ಅನುಭಾವ

ಕನ್ನಡ ಸಾಹಿತ್ಯದ ಎರಡು ಮುಖ್ಯ ಪ್ರವಾಹಗಳಾದ ಶರಣ ಮತ್ತು ಹರಿದಾಸ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದಾಗ ಜೀವನ ಸಾರ್ಥಕ್ಯವನ್ನು ತೋರುವ ಅಂತರಂಗದ ಅನುಭವ ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ 'ಅನುಭಾವ' ಎಂಬ ಮಾತು ಕನ್ನಡದಲ್ಲಿ ಒಂದು ವಿಶಿಷ್ಟ ಅರ್ಥ ವ್ಯಾಪ್ತಿಯನ್ನು ಪಡೆದಿದೆ.

'ಅನುಭಾವ' ಈ ಪದವನ್ನು ರಹಸ್ಯವಾದದ್ದು, ಸಮರ್ಥಿಸಲಾಗದ್ದು, ಭಾವನಾತ್ಮಕವಾದದ್ದು ಇತ್ಯಾದಿಯಾಗಿ ಮತ್ತು ವಿಶ್ವ ಮತ್ತು ವಿಶ್ವಕರ್ಮ ಇವರನ್ನು ಕುರಿತ ಕಲ್ಪನೆ ಎಂಬ ಅರ್ಥದಲ್ಲಿಯೂ ಉಪಯೋಗಿಸುತ್ತಾರೆ. ಆದರೆ ಒಮ್ಮೊಮ್ಮೆ ಈ ಈ ಪದವನ್ನು ಬದುಕಿನ ಊರ್ಧ್ವಮುಖವಾದ ಬೆಳವಣಿಗೆ ಎಂಬ ಅರ್ಥದಲ್ಲಿ ಬಳಸಿರುವುದನ್ನು ಕಾಣುತ್ತೇವೆ. ಆದ್ದರಿಂದಲೇ ಶರಣರು 'ಅನುಭಾವ' ಎಂಬುದು ಅಂತರಂಗದ ರತ್ನ—'ಆತ್ಮವಿದ್ಯೆ' ಎಂದು ಮುಂತಾಗಿ ಹೇಳಿದ್ದಾರೆ.

ಭಗವಂತನ ಈ ಸೃಷ್ಟಿಯ ರಹಸ್ಯವನ್ನು ತಿಳಿಯಲು ಅನಾದಿಕಾಲದಿಂದಲೂ ಮಾನವ ಪ್ರಯತ್ನಿಸುತ್ತಿದ್ದಾನೆ. ಈ ಪ್ರಯತ್ನದಲ್ಲಿ ಅವನು ಮೂರು ಮಾರ್ಗಗಳನ್ನು ಅನುಸರಿಸಿದನು. ಮೊದಲನೆಯದಾಗಿ ತಾನು ಪಡೆದ ಬುದ್ಧಿಯಿಂದ ಜ್ಞಾನ ಸಂಪಾದನೆ. ಈ ಜ್ಞಾನಾರ್ಜನೆಯಿಂದಲೇ ಮನುಷ್ಯ ಹಲವಾರು ಅನುಭವಗಳನ್ನು ಪಡೆಯಲು ಶಕ್ತನಾಗುತ್ತಾನೆ ಎಂಬುದು. ಆದರೆ ಕಾಲಕಳೆದಂತೆ ಮಾನವ ಅಭಿಪ್ರಾಯ ಬದಲಾಯಿತು. ಕೇವಲ ಬುದ್ಧಿ ಮಾತ್ರದಿಂದಲೇ ಸತ್ಯದ ಸಮುದ್ರ ಸ್ವರೂಪವನ್ನು ಗ್ರಹಿಸಲು ಅಸಾಧ್ಯ. ಪ್ರಯೋಗ ಪರೀಕ್ಷೆಗಳಿಂದ ಮಾತ್ರ ಮನುಷ್ಯ ಪೂರ್ಣ ಜ್ಞಾನವನ್ನು ಸಂಪಾದಿಸಬಲ್ಲ ಎಂಬ ಅಭಿಪ್ರಾಯ ಬೆಳೆಯಿತು. ಆದರೂ ಸತ್ಯಾನ್ವೇಷಣೆಗೆ ಬುದ್ಧಿ ಜ್ಞಾನಗಳನ್ನು ಮೀರಿದ ಒಳದೃಷ್ಟಿಯೊಂದು ಅಗತ್ಯವೆಂಬ ಅರಿವು ಉಂಟಾಯಿತು. ವಿಶ್ವಾಂತರಾಳದ ರಹಸ್ಯಗಳು ಎಷ್ಟೋಬಾರಿ ಬುದ್ಧಿ ಮತ್ತು ಜ್ಞಾನಗಳಿಂದ ಅತೀತವಾಗಿರುತ್ತದೆ. ಅಂತಹ ಸಮಯದಲ್ಲಿ ಸಾಧಕನು ತನ್ನ ಅಂತರ್‌ಚಕ್ಷುವಿನಿಂದ ಅವುಗಳನ್ನು ತಿಳಿಯಲು ಸಮರ್ಥನಾಗುತ್ತಾನೆ. ಹೃದಯದಲ್ಲಿ ಜಾಗೃತವಾಗುವ ಈ ದಿವ್ಯದರ್ಶನವನ್ನೇ ಶರಣರು ಮತ್ತು ದಾಸವರೇಣ್ಯರು ಅನುಭಾವ ಎಂದು ಕರೆದಿದ್ದಾರೆ.

ವೇದ ಭೂಮಿಯಾದ ಭರತಖಂಡದ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಅವಲೋಕಿಸಿದಾಗ ಈ ಅನುಭಾವ ಸಂಪತ್ತು ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಋಷಿದರ್ಶನವಾಗಿ ಮೂಡಿಬಂದಿರುವುದನ್ನು ಕಾಣಬಹುದಾಗಿದ್ದು ಈ ಮಾತಿನ ಅರ್ಥ ಮತ್ತಷ್ಟು ಸ್ಪಷ್ಟವಾಗಿ ಗೋಚರಿಸುತ್ತದೆ

ಋಷಿಗಳು ಸತ್ಯಶೋಧನೆಯಲ್ಲಿ ತೊಡಗಿದಾಗ ಅವರ ಮನಸ್ಸು ಅಂತರ್ಮುಖಿಯಾಗಿ ಪ್ರವಹಿಸಿರುವುದನ್ನು ಉಪನಿಷತ್ತುಗಳಲ್ಲಿ ಕಾಣುತ್ತೇವೆ. ವಿಶ್ವದ ಚಲನೆಗೆ ಕಾರಣವಾದ ಶಕ್ತಿ ಯಾವುದು ಎಂಬ ಪ್ರಶ್ನೆ ಹುಟ್ಟಿದಾಗ ಅವರಿಗೆ ತಿಳಿದ ಸತ್ಯವೆಂದರೆ ಅಣುವಿಂತಲೂ ಅಣು ಮಹತ್ತಿಗಿಂತಲೂ ಮಹತ್ತಾದ ಆತ್ಮವು ಸಕಲ ಪ್ರಾಣಿಗಳ ಹೃದಯ ಗುಹೆಯಲ್ಲಿದೆ ಮತ್ತು ಆತ್ಮದಲ್ಲಿಯೇ ಪರಮಾತ್ಮ ನೆಲೆಸಿದ್ದಾನೆ ಎಂಬುದನ್ನು ಕಂಡುಕೊಂಡರು. ಅನುಭಾವಿಗಳ ದೃಷ್ಟಿ ಏನೆಂಬುದನ್ನು ಉಪನಿಷತ್ತಿನಲ್ಲಿ ಸುಂದರವಾಗಿ ತಿಳಿಸಲಾಗಿದೆ.

ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಂ
ತತ್ತ್ವಂ ಪೂಷನ್ನಪಾವೃಣು
ಸತ್ಯಧರ್ಮಾಯ ದೃಷ್ಟಯೇ

ಚಿನ್ನದ ಮುಚ್ಚಳದಿಂದ ಸತ್ಯದ ಮುಖವನ್ನು ಮುಚ್ಚಿದೆ. ಆ ಮುಚ್ಚಳದ ಸೌಂದರ್ಯ ಎಷ್ಟೇ ಅನುಭವವಾಗಿದ್ದರೂ ಅದಕ್ಕೆ ಮಾರುಹೋಗಿ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣುವುದನ್ನು ನಾವು ಮರೆಯುವುದಿಲ್ಲ. ಆದ್ದರಿಂದ ಚಿನ್ನದ ಮುಚ್ಚಳವನ್ನು ತೆರೆದು ಸತ್ಯದ ದರ್ಶನ ಮಾಡುವ ದೃಷ್ಟಿಯನ್ನು ದಯಪಾಲಿಸು — ಎಂದು ಬೇಡಿಕೊಳ್ಳುತ್ತಾರೆ. ಹೀಗೆ ಪೂರ್ಣ ಸತ್ಯವನ್ನು ಕಾಣುವ ದಿವ್ಯ ದೃಷ್ಟಿಯನ್ನು ಅನುಭಾವಿ ಪಡೆದು ತಾನು ಕಂಡ ದಿವ್ಯದರ್ಶನವನ್ನು ಮಾನವ ಜನಾಂಗದ ಬದುಕಿನ ಸಾರ್ಥಕತೆಗೆ ನೀಡುತ್ತಾನೆ. ಶರಣರು ಮತ್ತು ದಾಸರು ಇಂತಹ ದಿವ್ಯ ದೃಷ್ಟಿಗಾಗಿ ಹಂಬಲಿಸಿ ಸಾಧನೆಯ ಮಾರ್ಗದಲ್ಲಿ ನಡೆದು ಆಧ್ಯಾತ್ಮಿಕ ಅನುಭಾವಿಗಳಾದಾಗ ತಾವು ಕಂಡ ಅನುಭವನ್ನು ಜನಸಾಮಾನ್ಯರಿಗೆ ನೀಡಿದರು.

**ಶ್ರೀ ಸಿ.ನಂ. ಕೃಷ್ಣಮೂರ್ತಿ**

ಅನುಭಾವಕ್ಕೂ ಸಾಹಿತ್ಯಕ್ಕೂ ಇರುವ ಸಂಬಂಧವನ್ನು ಸ್ಥೂಲವಾಗಿಯಾದರೂ ತಿಳಿಯುವುದು ಅಗತ್ಯ. ಏಕೆಂದರೆ ಸಾಹಿತ್ಯವೆಂದರೆ ಕೇವಲ ಮನಸ್ಸನ್ನು ರಂಜಿಸುವ ಕಲ್ಪನಾ ಲೋಕದಲ್ಲಿ ವಿಹರಿಸುವಂತೆ ಮಾಡುವ ತಾತ್ಕಾಲಿಕ ಸಾಧನವಲ್ಲ. ಸಾಹಿತ್ಯದ ಮುಖ್ಯ ಉದ್ದೇಶ ಮಾನವನಿಗೆ ಆತ್ಮದ ಅರಿವನ್ನುಂಟು ಮಾಡುವುದೇ ಆಗಿದೆ, ಮಾನವನಲ್ಲಿರುವ ಭಗವಂತನನ್ನು ಕಾಣಲು ಸಾಹಿತ್ಯ ಸಹಕಾರಿಯಾಗಬೇಕು. ವ್ಯಕ್ತಿಯ ಒಳಪ್ರಜ್ಞೆ ಹಾಗೂ ಭಗವಂತನ ನಡುವಿರುವ ಸಾಮರಸ್ಯವನ್ನು ಅನುಭವಿಸುವ ಚೈತನ್ಯವನ್ನು ಸಾಹಿತ್ಯ ಒದಗಿಸಬೇಕು. ಸಾಹಿತ್ಯ ಮನುಷ್ಯನಲ್ಲಿ ಸಹಜವಾಗಿರುವ ಸ್ವಾರ್ಥ, ಭೀತಿ, ಶೋಕ, ಸಂಕುಚಿತ ಭಾವನೆಗಳನ್ನು ಹೋಗಲಾಡಿಸಿ ಮುಕ್ತಿ ಮಾರ್ಗವನ್ನು ತೋರುವ ಕೈದೀವಿಗೆಯಾಗಬೇಕು. ಶ್ರೀ ಅರವಿಂದರು ಕಾವ್ಯ ರಚನೆಯ ಬಗ್ಗೆ ಹೇಳುತ್ತ ಹೃದಯಾಂತರಾಳದ ಭಾವ ಹಾಗೂ ದರ್ಶನಗಳಿಂದ ರಚಿಸಬೇಕೆಂದು ಹೇಳುತ್ತಾರೆ. ಅಂತಹ ಕಾವ್ಯವು ಮಾನವ ಪ್ರಜ್ಞೆಯನ್ನು ವಿಸ್ತಾರಗೊಳಿಸುತ್ತದೆ. ಉದಾತ್ತೀಕರಿಸುತ್ತದೆ, ಅವನ ಪೂರ್ಣ ವ್ಯಕ್ತಿತ್ವ ನಿರ್ಮಾಣಕ್ಕೆ ನೆರವು ನೀಡುತ್ತದೆ

ಶರಣರು ಮತ್ತು ದಾಸರ ವಚನಗಳಲ್ಲಿ ಸಾಹಿತ್ಯದ ಈ ಘನೋದ್ದೇಶವನ್ನು ಕಾಣುತ್ತೇವೆ. ಸಾಹಿತ್ಯ ರಚಿಸಿ ಕೇವಲ ಜನಮನವನ್ನು ರಂಜಿಸುವ ಉದ್ದೇಶ ಅವರದಾಗಿರಲಿಲ್ಲ. ಮಾನವ ಬದುಕಿನ ಗುರಿಯನ್ನು ಸಾಧಿಸಿ ಜನ್ಮ ಸಾರ್ಥಕ್ಯವನ್ನು ಪಡೆಯುವ ಮಾರ್ಗವನ್ನು ತೋರಿಸುವುದೇ ಅವರ ಪರಮ ಗುರಿಯಾಗಿತ್ತು. ತಾವು ಪಡೆದ ಅಲೌಕಿಕವಾದ ಆನಂದ ಅನುಭವಗಳನ್ನು ತಮ್ಮ ವಚನಗಳಲ್ಲಿ ಹಾಡುಗಳಲ್ಲಿ ಹರಿಸಿದರು. ಹೀಗೆ ಹರಿದು ಬಂದ ಅನುಭಾವ ಸಾಹಿತ್ಯ ಕನ್ನಡಿಗರ ಮನಸ್ಸು ಹೃದಯಗಳನ್ನು ಪಾವನಗೊಳಿಸಿತು, ಯುಗಯುಗದ ಕತ್ತಲು ಹರಿದು ಪ್ರತಿ ಹೃದಯದಲ್ಲಿಯೂ ಜ್ಯೋತಿ ಬೆಳಗಿತು.

ಶರಣರಲ್ಲಿ ಪರಮಜ್ಞಾನಿಯೂ, ಮಹಾ ಅನುಭಾವಿಯೂ ಆದ ಅಲ್ಲಮಪ್ರಭು ತೀವ್ರವಾದ ವೈರಾಗ್ಯವನ್ನು ಸಾಧಿಸಿದರು. ಒಮ್ಮೆ ಅಲ್ಲಮರು ಕರ್ಮ ಬಂಧನಕ್ಕೆ ಒಳಗಾದ ಸಿದ್ಧರಾಮನನ್ನು ಹೀಗೆ ಎಚ್ಚರಿಸುತ್ತಾರೆ.

ತನುವೆಂಬ ಏರಿಗೆ, ಮನವೆಂಬ ಕಟ್ಟೆ
ಆಚಾರವೆಂಬ ಸೋಪಾನ
ಪರಮಾನಂದವೆಂಬ ಜಲವ ತುಂಬಿ
ಕೆರೆಯ ಕಟ್ಟ ಬಲ್ಲವರನಾರನೂ ಕಾಣೆ
ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು
ಗುಹೇಶ್ವರ ನಿಮ್ಮಾಣೆ.

ಶಾಶ್ವತ ಸುಖವನ್ನು ನೀಡುವ ಕರ್ಮಾಚರಣೆಯಲ್ಲಿ ತೊಡಗುವಂತೆ ಸೂಚಿಸುತ್ತಾರೆ ಹೂವು ಅಳಿದು ಅದರ ಪರಿಮಳ ಮಾತ್ರ ಉಳಿಯುವಂತಹ, ಚಿನ್ನ ಅಳಿದು ಅದರ ಒಡ್ಡ ಮಾತ್ರ ನಿಲ್ಲುವಂತಹ, ಕರ್ಮಗಳೆಲ್ಲಾ ನಾಶವಾಗಿ ಅದರ ಫಲ ಮಾತ್ರ ಉಳಿಯುವಂತಹ, ಕರ್ಮಗಳನ್ನು ಆಚರಿಸಿದಾಗ ನೀನೇ ಶಿವನಾಗುವೆ—ಎಂದು ವಿವರಿಸುತ್ತಾರೆ ಅಲ್ಲಮರ ಅನುಭವದ ಬೆಳಕು ಸಿದ್ಧರಾಮನನ್ನು ತಾಕುತ್ತದೆ. ಆತ್ಮದ ಅರಿವೇ ಅನುಭಾವ ಅಲ್ಲಮರ ಅನೇಕ ವಚನಗಳಲ್ಲಿ ಈ ಅನುಭಾವ ದಟ್ಟವಾಗಿ ಪ್ರವಹಿಸಿರುವುದನ್ನು ಕಾಣಬಹುದು.

ಶಿವಶರಣೆ ಅಕ್ಕಮಹಾದೇವಿಯ ವಚನಗಳಲ್ಲಿ ಆಕೆಯ ಅನುಭಾವ ಮಾರ್ಗವನ್ನು ತಿಳಿಯಬಹುದು, ಆಕೆಯ ವಚನಗಳಲ್ಲಿ ಅನುಭಾವ ಹರಳುಗಟ್ಟಿರುವುದನ್ನು ಗುರುತಿಸಬಹುದು

ಘನವ ಕಂಡೆ ಅನುವ ಕಂಡೆ ಆಯತವ ಕಂಡೆ
ಸ್ವಾಯತವ ಕಂಡೆ, ಸನ್ನಿಹಿತವ ಕಂಡೆ
ಅರಿವನರಿದು ಮರಹ ಮರೆದೆ
ಕುರುಹಿನ ಮೋಹದ ಮರವೆಯ ನೀಡಾಡಿದೆ
ಚೆನ್ನ ಮಲ್ಲಿಕಾರ್ಜುನಾ
ನಿಮ್ಮನರಿದು ಸೀಮೆಗೆಟ್ಟೆನು

ಶಿವನ ಇರುವಿಕೆಯನ್ನು ತನ್ನ ಅನುಭಾವದಿಂದ ಕಂಡುಕೊಂಡು ಆಕೆ ಧನ್ಯಳಾಗುತ್ತಾಳೆ

ಬಸವಣ್ಣನವರು ಓರ್ವಶ್ರೇಷ್ಠ ಭಕ್ತರು. ಭಕ್ತಿಯಿಂದಲೇ ಮುಕ್ತಿಮಾರ್ಗವನ್ನು ಕಂಡುಕೊಂಡವರು. ಸಾಧನೆಯ ಮಾರ್ಗದಲ್ಲಿ ನಡೆಯುತ್ತಿರುವಾಗ ಪಡೆದ ಅನುಭಾವ ಸಂಪತ್ತು ಅವರ ನೂರಾರು ವಚನಗಳಲ್ಲಿ ಅರಳಿ ತನ್ನ ದಿವ್ಯಸುಗಂಧವನ್ನು ದಿಕ್ಕುಗಳಿಗೂ ಹಬ್ಬಿಸಿದ. ಮಾನವನ ಆತ್ಮದಲ್ಲಿ ಪರಮಾತ್ಮನ ಇರುವಿಕೆಯನ್ನು ಕಂಡುಕೊಂಡ ಬಸವಣ್ಣನವರ ಅನುಭಾವ ದೃಷ್ಟಿ ಈ ಕೆಳಗಿನ ವಚನದಲ್ಲಿ ಹೀಗೆ ವ್ಯಕ್ತವಾಗಿದೆ.

ಜಗವ ಸುತ್ತಿಹುದು ನಿನ್ನ ಮಾಯೆಯಯ್ಯಾ
ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ
ನೀನೇ ಜಗಕ್ಕೆ ಬಲ್ಲಿದನು
ಆನು ನಿನಗೆ ಬಲ್ಲಿದನು ಕಂಡಯ್ಯಾ
ಕರಿಯು ಕನ್ನಡಿಯೊಳಡಗಿದಂತೆಯ್ಯಾ
ಎನ್ನೊಳಗೆ ನೀನಡಗಿದೆ ಕೂಡಲ ಸಂಗಮದೇವಾ.

ಹೀಗೆ ಶರಣರ ವಚನಗಳಲ್ಲಿ ಕಂಡು ಬರುವ ನೂರಾರು ಚಿಕ್ಕ ನುಡಿಗಳಲ್ಲಿ ಹಿರಿದಾದ ಅರ್ಥ ತುಂಬಿದೆ. ಅವರ ಗಾಢವಾದ ಚಿಂತನೆಯನ್ನು ಅನುಭಾವ ದೃಷ್ಟಿಯನ್ನು ಕಾಣಬಹುದು. ಉದಾಹರಣೆಗೆ ಕೆಲವು ಸೂಕ್ತಿಗಳನ್ನು ನೋಡಬಹುದಾಗಿದೆ.

"ಒಲೆ ಹೊತ್ತಿ ಉರಿದೊಡೆ ನಿಲಬಹುದಲ್ಲದೆ
ಧರೆ ಹತ್ತಿ ಉರಿದೊಡೆ ನಿಲಬಹುದೆ"
"ತನ್ನ ತಾನರಿದೊಡೆ ತನ್ನರಿವೆ ಗುರು"
"ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು
ದುಃಖ ನೋಡ"
"ಗುರುಗಂಜಿ ಮಾಣಿಕಕ್ಕೆ ಸರಿಯಪ್ಪುದೆ"?
"ಮಾಲೆಗಾರನ ಕೇಳಿ ನನೆ ಅರಳುವುದೇ?"
"ಸದುವಿನಯವೇ ಸದಾಶಿವನ ಒಲುಮೆಯಯ್ಯಾ?
"ಅರಿಗಾರು ಇಲ್ಲ ಕಟ್ಟವಂಗೆ ಕೆಳೆಯಿಲ್ಲ"
"ಅರಿದರೆ ಶರಣ ಮರೆದರೆ ಮಾನವ "

ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ದಾಸಸಾಹಿತ್ಯದಲ್ಲಿ ದಾಸಶ್ರೇಷ್ಠರ ಅನುಭಾವದ ಪ್ರವಾಹವನ್ನು ಕಾಣಬಹುದು, ನಾವು ಈ ಪ್ರಪಂಚದಲ್ಲಿ ಬದುಕಿರುವಾಗ ಹೊಂದಬೇಕಾದ ಅನುಸಂಧಾನವನ್ನು ಪುರಂದರದಾಸರ ಅನುಭಾವ ದೃಷ್ಟಿ ಹೀಗೆ ವ್ಯಕ್ತ ಮಾಡಿವೆ.

ಹ್ಯಾಂಗೆ ಇರಬೇಕು ಸಂಸಾರದಲ್ಲಿ
ಹ್ಯಾಂಗೆ ಬರೆದಿತ್ತೊ ಪ್ರಾಚೀನದಲ್ಲಿ
ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ
ಆ ಕ್ಷಣದಲ್ಲಿ ಹಾರಿಹೋದಂತೆ
ಮಕ್ಕಳಾಡಿ ಮನೆ ಕಟ್ಟಿದಂತೆ
ಆಟ ಸಾಕೆಂದು ಅಳಿಸಿ ಹೋದಂತೆ
ವಸತಿಕಾರನು ವಸತಿ ಕಂಡಂತೆ
ಹೊತ್ತಾರೆದ್ದು ಹೊರಟು ಹೋದಂತೆ
ಸಂಸಾರ ಪಾಶವ ನೀನೆ ಬಿಡಿಸಯ್ಯಾ
ಕಂಸಾರಿ ಪುರಂದರ ವಿಠಲರಾಯ.

'ಕೆರೆಯ ನೀರನು ಕೆರೆಗೆ ಚೆಲ್ಲಿರೋ' ಎಂಬಂತೆ ಸಂಸಾರದಲ್ಲಿ ನಿರ್ಲಿಪ್ತ ಭಾವನೆಯನ್ನು ಬೆಳೆಸಿಕೊಳ್ಳಬೇಕು, ತನ್ನೊಳಗಿನ ತಿಳಿವನ್ನು ಪಡೆಯುವುದೇ ನಿಜವಾದ ಧರ್ಮವೆಂದು ಪುರಂದರದಾಸರು ಸ್ಪಷ್ಟವಾಗಿ ಹೇಳಿದ್ದಾರೆ

ಕನಕದಾಸರೂ ಸಹ ಸಂಸಾರದ ನಶ್ವರತೆಯನ್ನು ಸ್ವಾರಸ್ಯವಾಗಿ ಹೇಳಿದ್ದಾರೆ.

ಬೆಳ್ಳಿ ಬಂಗಾರಿಟ್ಟುಕೊಂಡು,
ಒಳ್ಳೆ ವಸ್ತ್ರ ಹೊದ್ದುಕೊಂಡು
ಆಳ್ವಾಚಾರಿ ಗೊಂಬೆಯೊಂದು ಆಡಿ ಹೋಯಿತು
ಹಳ್ಳ ಹರಿದ ಮೇಲೆ ಗುಳ್ಳೆ ಒಡೆಯೆ ಕಲ್ಲನೀರ ಮೇಲೆ
ಗುಳ್ಳೆ ಒಡೆದ ತೆರನು ಕಾಣೋ ಸಂಸಾರದಾಟ.

ಶರಣರ ಸೂಕ್ತಿಗಳಂತೆ ದಾಸರ ಅರ್ಥಗರ್ಭಿತ ಸಣ್ಣ ಸಣ್ಣ ನುಡಿಗಳನ್ನು ಚಿಂತಿಸಿದಾಗ ಮಾನವ ಜೀವಿತದ ಉದ್ದೇಶ, ಗುರಿ, ಸಾರ್ಥಕತೆಗಳ ಅರಿವು ಉಂಟಾಗುತ್ತದೆ. ಅವುಗಳಲ್ಲಿ ಕೆಲವನ್ನು ಉದಾಹರಿಸಬಹುದು.

"ಆತ್ಮನಾವ ಕುಲ ಜೀವನಾವ ಕುಲ"
"ಮನವೆ ಗಂಗೆ ಮನವೆ ಮಣಿಕರ್ಣಿಕೆಯು"
"ಕಲ್ಲಾಗಿರಬೇಕು ಕಠಿಣ ಭವವೆಂಬ ತೊರೆ –
ಯೊಳಗೆ, ಬಿಲ್ಲಾಗಿರಬೇಕು ಬಲ್ಲವರೊಳಗೆ"
"ಹೀನ ಗುಣವುಳ್ಳವಗೆ ಹಿರಿತನ ಬಂದರೇನು?"
"ಮಂಡೆ ಬೋಳಾದರೆ ಸಾಲದು
ಮನ ಬೋಳಾಗಬೇಕು"
"ಘಾತಕ ತನವನು ಬಿಡದೆ
ನಿರಂತರ ಗೀತೆಯ ನೋದಿದರೇನು ಫಲ?"

ಶರಣರ ವಚನಗಳಲ್ಲಿ ದಾಸರ ಹಾಡುಗಳಲ್ಲಿ ಅನುಭಾವ ಪ್ರಮುಖವಾಗಿ ಕಂಡರೂ, ಕನ್ನಡದ ಇನ್ನಿತರ ಕವಿಗಳ ಕೃತಿಗಳಲ್ಲಿಯೂ ಅನುಭಾವ ಧಾರೆಯನ್ನು ಕಾಣಬಹುದು. ಹರಿಹರನ ರಗಳೆಗಳು, ರತ್ನಾಕರನ ಭರತೇಶ ವೈಭವ, ಮಹಾಲಿಂಗರಂಗನ ಅನುಭಾವಾಮೃತ – ಹೀಗೆ ಇನ್ನೂ ಮುಂತಾದ ಕೃತಿಗಳಲ್ಲಿ ಅನುಭಾವಿ ಕವಿಗಳು ತಮ್ಮ ಅನುಭಾವ ಪೀಯೂಷವನ್ನು ಕನ್ನಡಿಂಗೆ ನೀಡಿದ್ದಾರೆ.

ಇಂದಿನ ಜಟಿಲತೆ, ಸಂಕೀರ್ಣತೆ, ಘರ್ಷಣೆಗಳಿಂದ ಕೂಡಿದ ಮಾನವ ಬದುಕಿಗೆ ಸಾಂತ್ವನ ನೀಡಿ ಅದರ ಉನ್ನತಿಗೆ ಸಾರ್ಥಕತೆಗೆ ಅನುಭಾವ ಸಾಹಿತ್ಯ ಸಹಾಯಕವಾಗಿದೆ. ಮಾನವ ಈ ಬೆಳಕಿನಿಂದ ತನ್ನ ಅಜ್ಞಾನವನ್ನು ಹೋಗಲಾಡಿಸಿಕೊಂಡು ಸಾಧನೆಯ ಮಾರ್ಗದಲ್ಲಿ ನಡೆದು ಜೀವನದ ಗುರಿಯನ್ನು ತಲುಪಬಹುದಾಗಿದೆ.



ಗೃಹಲಕ್ಷ್ಮಿ

# ಮಹಾಸತೀ ಸೀಮಂತಿನೀ

"ಚಿತ್ರವರ್ಮ" ನೃಪತಿಯ ಏಕಮಾತ್ರ ಪುತ್ರಿ "ಸೀಮಂತಿನೀ". ಎಲ್ಲ ತಂದೆ–ತಾಯಿಯರಂತೆ, ಸೀಮಂತಿನಿಯ ತಾಯಿಗೆ ಈಕೆಯ ಭವಿಷ್ಯವನ್ನು ತಿಳಿಯುವ ಕುತೂಹಲವುಂಟಾಯಿತು. ಅದರಂತೆಯೆ ಜ್ಯೋತಿಷ್ಯರನ್ನು ಕರೆಯಿಸಿಕೊಂಡು ಈಕೆಯ ಭವಿಷ್ಯವನ್ನು ಕುರಿತು ಪ್ರಶ್ನಿಸಿದಳು.

"ಮಹಾರಾಣಿ ಯವರೇ! ಜನ್ಮಕುಂಡಲಿಯ ಗ್ರಹಗತಿಯ ಪ್ರಕಾರ ಈಕೆಯ ಭವಿಷ್ಯ ಅಷ್ಟೊಂದು ಉತ್ತಮವಿಲ್ಲ. ಚಿಕ್ಕಂದಿನಲ್ಲಿಯೇ ಪತಿವಿಯೋಗಳಾಗುವ ದುರ್ಯೋಗವು ಈ ಜಾತಕದಲ್ಲಿಯೇ ಬಲವತ್ತರವಾಗಿದೆ". ಜ್ಯೋತಿಷ್ಯರ ಈ ಮಾತನ್ನು ಕೇಳಿದ ಮಹಾರಾಣಿಗೆ ತುಂಬಾ ದುಃಖವಾಯಿತು. ಆದರೂ ವಿಧಿಯನ್ನು ಯಾರೂ ಬದಲಾಯಿಸುವಂತಿರಲಿಲ್ಲ.

ಕಾಲ ಉರುಳಿತು. ಸೀಮಂತಿನಿಯ ವಿವಾಹವು ನಿಷಧರಾಜನಾದ ಚಿತ್ರಾಂಗದನೆಂಬುವನೊಂದಿಗೆ ವೈಭವದಿಂದ ಸಾಗಿತು. ಈತ ನಳಮಹಾರಾಜನ ಮೊಮ್ಮಗ. ಸೀಮಂತಿನಿಯು ಜ್ಯೋತಿಷ್ಯರು ನುಡಿದ ತನ್ನ ಭವಿಷ್ಯದ ದುರ್ಘಟನೆಯನ್ನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳಬೇಕೆಂದು ದೃಢನಿಶ್ಚಯಿಸಿದಳು. ಇದಕ್ಕಾಗಿ ಭಗವಾನ್ ಯಾಜ್ಞವಲ್ಕ್ಯ ಮಹರ್ಷಿಗಳ ಪತ್ನಿಯಾದ ಬ್ರಹ್ಮವಾದಿನಿ 'ಮೈತ್ರೇಯಿ'ಯನ್ನು ಆಶ್ರಯಿಸಿ ತನ್ನ ಮಾಂಗಲ್ಯಭಿಕ್ಷೆಯನ್ನು ಬೇಡಿದಳು. ಕಣ್ಣೀರು ಸುರಿಸುತ್ತ ತನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದ ಆಕೆಗೆ ಮೈತ್ರೇಯಿಯು ಆಶ್ವಾಸನೆ ನೀಡಿ ಸೋಮವಾರ ವ್ರತವನ್ನು ಆಚರಿಸುವಂತೆ ಹೇಳಿ, ಅದರ ವಿಧಿವಿಧಾನಗಳನ್ನೆಲ್ಲಾ ತಿಳಿಸಿದಳು.

ಸೀಮಂತಿನಿಯು, ಶಿವಪ್ರೀತ್ಯರ್ಥವಾದ ಸೋಮವಾರವ್ರತ ವಿಧಿವತ್ತಾಗಿ ಸಾಗುತ್ತ ಬಂದಿತು.

ಒಮ್ಮೆ "ಚಿತ್ರಾಂಗದ" ಬೇಟೆಗಾಗಿ ತನ್ನ ಸೇನೆಯೊಂದಿಗೆ ಕಾಡಿಗೆ ತೆರಳಿದನು. ಒಂದು ದಿನ ದೋಣಿಯಲ್ಲಿ ಕುಳಿತು ಯಮುನಾನದಿಯಲ್ಲಿ ವಿಹರಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಬಿರುಗಾಳಿ ಎದ್ದು ದೋಣಿ ಮುಳುಗಿತು. ಎಷ್ಟು ಪ್ರಯತ್ನಪಟ್ಟರೂ ರಾಜನ ದೇಹ ಸಿಗಲಿಲ್ಲ. ಇತ್ತ ರಾಜನಿಲ್ಲದ ನಿಷಧರಾಜ್ಯ ಶತ್ರುಗಳ ಕೈಸೇರಿತು. ಸೀಮಂತಿನಿಯು ಕೈಸೆರೆಯಾದಳು. ಈ ದುಃಖಾತಿಶಯದಲ್ಲಿಯೂ ಸೀಮಂತಿನಿಯು ಮೈತ್ರೇಯಿಯ ಉಪದೇಶವನ್ನು ಬಿಡದೆ, ಶಿವೋಪಾಸನೆಯನ್ನು ಹೆಚ್ಚು ಹೆಚ್ಚಾಗಿ ಮಾಡಲಾರಂಭಿಸಿದಳು. "ಕರುಣಾಳುವಾದ ಶಿವನ ಕೃಪೆಯಿಂದ ತನ್ನ ಇಂದಿನ ಕಷ್ಟಗಳೆಲ್ಲವೂ ಮಾಯವಾಗುವುವು" ಎಂದು ದೃಢವಾಗಿ ನಂಬಿದ್ದಳು.



ನೀರುಪಾಲಾದ ಚಿತ್ರಾಂಗದನ ಸೌಂದರ್ಯಕ್ಕೆ ಮಾರುಹೋದ ನಾಗಲೋಕದ ಕನ್ಯೆಯರು, ತಮ್ಮ ರಾಜನಾದ ತಕ್ಷಕನ ಮುಂದುಗಡೆಯಲ್ಲಿ ಆತನನ್ನು ಕರೆದುಕೊಂಡು ಹೋಗಿ ನಿಲ್ಲಿಸಿದರು.

"ಅಯ್ಯಾ! ಚಿತ್ರಾಂಗದ! ನೀನು ಮಹಾಪುಣ್ಯಶಾಲಿ. ನಿನ್ನ ಪತ್ನಿ ಮಹಾಪತಿವ್ರತೆ. ಇವಳ ಶಿವೋಪಾಸನೆ ಅನನ್ಯಾದೃಶ. ಇವಳ ತಪಸ್ಸಿನ ಪ್ರಭಾವವೇ ನಿನಗೆ ಇಂದಿನ ರಕ್ಷಾಕವಚವಾಗಿದೆ. ಇಂಥವಳ ಕೈಹಿಡಿದ ಭಾಗ್ಯವಂತನಾದ ನಿನ್ನನ್ನು ಸಂದರ್ಶಿಸಿ ಉಪಚರಿಸುವ ಭಾಗ್ಯ ನನಗೆ ಈಗ ಬಂದಿದೆ. "ನಿನ್ನ ಇಷ್ಟವೇನು? ಹೇಳು. ಅದನ್ನು ನಾನು ನಡೆಯಿಸಲು ಸರ್ವದಾ ಸಿದ್ಧನಿದ್ದೇನೆ" ಎಂದು ನಾಗರಾಜನು, ಚಿತ್ರಾಂಗದನನ್ನು ಸಮಾಧಾನ ಪಡಿಸುತ್ತ ನುಡಿದನು.

"ಮಹಾರಾಜ! ನಾನು ತಂದೆ – ತಾಯಿಯರ ಏಕಮಾತ್ರ ಪುತ್ರ. ಅವರು ಈಗ ದುಃಖಸಾಗರದಲ್ಲಿ ಮುಳುಗಿದ್ದಾರೆ. ಅವರನ್ನು ಸಂತೈಸುವುದು ಪುತ್ರನಾದ ನನ್ನ ಆದ್ಯಕರ್ತವ್ಯ. ಆದುದರಿಂದ ನನ್ನನ್ನು ಭೂಲೋಕಕ್ಕೆ ಕಳುಹಿಸಿಕೊಡಬೇಕೆಂಬುದೇ ನನ್ನ ಕಳಕಳಿಯ ಪ್ರಾರ್ಥನೆ". ಎಂದು ಚಿತ್ರಾಂಗದನು ನಾಗರಾಜನಾದ ತಕ್ಷಕನಲ್ಲಿ ತನ್ನ ಆಸೆಯನ್ನು ಅರಿಕೆಮಾಡಿಕೊಂಡನು.

ಈತನ ಪಿತೃಭಕ್ತಿಗೆ ಮೆಚ್ಚಿದ ಸರ್ಪರಾಜನು "ಅಯ್ಯಾ! ರಾಜಕುಮಾರ! ನೀನು ನಿನ್ನ ತಂದೆಗೆ ಅರ್ಹನಾದ ಪುತ್ರ. ನಿನ್ನ ವಿಷಯದಲ್ಲಿ ನಾನು ಪೂರ್ಣವಾಗಿ ಮೆಚ್ಚಿಕೊಂಡಿದ್ದೇನೆ. ನಿನ್ನ ಇಷ್ಟದಂತೆ ನಡೆದುಕೊಳ್ಳುವುದಲ್ಲದೆ. ನಿನಗೆ ಹನ್ನೆರಡು ಸಹಸ್ರ ಗಜಗಳ ಬಲವನ್ನು ಅನುಗ್ರಹಿಸಿರುವೆನು" ಎಂದು ಹೇಳಿ ಒಂದು ದಿವ್ಯಾಶ್ವವನ್ನು, ಒಂದು ಚಿಂತಾಮಣಿಯನ್ನು ಕೊಟ್ಟು, ನಾಗಲೋಕದಿಂದ ಭೂಲೋಕಕ್ಕೆ ಸಕಲ ಮರ್ಯಾದೆಗಳೊಂದಿಗೆ ಬೀಳ್ಕೊಟ್ಟನು. ನಡೆದ ದುರ್ಘಟನೆಗಳೆಲ್ಲವನ್ನು ತಿಳಿದು, ಶತ್ರುರಾಜ್ಯದ ಮೇಲೆ ಧಾಳಿಮಾಡಿ, ಅವರನ್ನು ನಾಶಪಡಿಸಿದುದಲ್ಲದೆ, ತನ್ನ ಪತ್ನಿಯಾದ ಶಿವಭಕ್ತೆ, ಸೀಮಂತನೀ ದೇವಿಯನ್ನು ಕಾರಾಗೃಹದಿಂದ ಮುಕ್ತಳನ್ನಾಗಿ ಮಾಡಿ, ತನ್ನ ರಾಜಕ್ಕೆ ಅಧಿಪತಿಯಾಗಿ ಸುಖಸಂತೋಷದಿಂದ ರಾಜ್ಯಭಾರ ಮಾಡಲು ಆರಂಭಿಸಿದನು. ಈತನ ಕಾಲದಲ್ಲಿ 'ಶಿವೋಪಾಸನೆ' ರಾಜ್ಯದಲ್ಲಿ ಎಲ್ಲೆಲ್ಲೂ ವ್ಯಾಪಿಸುವಂತಾಯಿತು.



ವಿದ್ವಾನ್ ಬಿ. ಬಾಲಗಣಪತಿ ಭಟ್ಟ

# ಹದಿಬದೆಯ ಧರ್ಮ

ಇದೊಂದು ಪಾತಿವ್ರತ್ಯ ಧರ್ಮ ತತ್ತ್ವ ಸಾರದ ಕಾವ್ಯ. ಸಾಂಗತ್ಯದಲ್ಲಿ ರಚನೆಯಾಗಿದೆ. ಪರಮಾರ್ಥ ಹಿತೋಪದೇಶ ತಿಳಿಯಲು, ಗರತಿಯರಾಗಿ ಬಾಳಲು ಮಾರ್ಗದರ್ಶನ ಮಾಡುವುದು. ಸತಿ ಅನಸೂಯ, ಸಾಧ್ವಿ ಸೀತೆಯರಂತೆ ಆಗಲು ಯತ್ನಿಸಬಹುದು. "ಪತಿಯೇ ಪರಮಗುರು, ಪತಿಯೇ ದೇವತೆ, ಪತಿಯೇ ಸದ್ಗತಿಯೆಂದು ಪತಿಯ ಪದಾಂಬುಜದೊಳು ಭಕ್ತಿಗೈವುದು ಸತಿಯರ ಧರ್ಮದಸಾರ". ಮೈಸೂರು ಶ್ರೀರಂಗಪಟ್ಟಣದ ಪಶ್ಚಿಮ ರಂಗಧಾಮನ ಭಕ್ತಳಾದ ಸಂಚಿ ಹೊನ್ನಮ್ಮ ಚಿಕದೇವರಾಜ ಒಡೆಯರ ಊಳಿಗದವಳಾಗಿದ್ದಳು. ದೊರೆಗಳ ಮೆಚ್ಚುಗೆ ಪಡೆದಿದ್ದಳು. ಆಕೆಯು ಗುರುಗಳಾದ ಸಿಂಗರಾರ್ಯ, ತಿರುಮಲಾರ್ಯರ ಸಾನ್ನಿಧ್ಯದಲ್ಲಿದ್ದು ಕವಯಿತ್ರಿಯೂ ಆದಳು. ಸಾಂಗತ್ಯ ಹಾಡಿಕೊಂಡು ಹೆಣ್ಣು ಮಕ್ಕಳು ತಮ್ಮ ಜೀವನವನ್ನು ಪಾವನ ಮಾಡಿಕೊಳ್ಳಲು ಅತ್ಯುತ್ತಮವಾದ ಈ ಕಾವ್ಯವನ್ನು ರಚನೆಮಾಡಿದಳು. ತಮ್ಮ ತಮ್ಮ ಅವಗುಣಗಳನ್ನು ತಿದ್ದಿಕೊಳ್ಳಲು ಈ ಕಾವ್ಯ ತುಂಬಾ ಸಹಾಯವಾಗುವುದು.

ಪತಿವ್ರತೆಯರಿದ್ದಲ್ಲಿ ಮಳೆ ಬೆಳೆ ಚೆನ್ನಾಗಿ ಆಗುವುದು. ಅವರ ಪಾದ ದರ್ಶನದಿಂದ ಪುಣ್ಯ. ಅವರಿದ್ದೆಡೆ ಪುಣ್ಯ ಕ್ಷೇತ್ರ; ಪುಣ್ಯ ತೀರ್ಥ ಅವರು ಪ್ರತ್ಯಕ್ಷ ದೇವತೆಯರು, ಅವರಿದ್ದೆಡೆ ಏಳಿಗೆ.

ಹೆಣ್ಣು ಮಕ್ಕಳು ತಾವು ತುಂಬಾ ರೂಪವತಿಯರೆಂದೂ, ತುಂಬಾ ಶ್ರೀಮಂತರ ಮಕ್ಕಳೆಂದು, ತುಂಬಾ ವಿದ್ಯಾವತಿಯರೆಂದು ಅಹಂಭಾವ ಪಡದೆ ಗಂಡದಿರನ್ನ ಅನುಸರಿಸಿಕೊಳ್ಳುವುದು ಲೇಸು. ತಮ್ಮ ಪತಿಯರ ತಪ್ಪುಗಳನ್ನು ಭೂತಗನ್ನಡಿಯಲ್ಲಿ ಹೆಚ್ಚು ನೋಡದೆ ಅವರಿವರೊಡನೆ ಹೇಳದೆ ಮರೆಮಾಚುವುದು ಲೇಸು...

ಸತಿ ಪತಿಯರು ಅನ್ಯೋನ್ಯ ಪ್ರೀತಿಯಿಂದ ಸಂಸಾರದಲ್ಲಿ ಸುಖಕಾಣಬೇಕು. ಹೀಗೆ ನಡೆದುಕೊಂಡಲ್ಲಿ ಸಂತಾನ ಸೌಭಾಗ್ಯ ಸಂಪತ್ತು ಆಯುರಾರೋಗ್ಯ ಖಂಡಿತ ದೇವರು ದಯಪಾಲಿಸುವನು. ಅತ್ತೆ ಮಾವಂದಿರನ್ನು ತಾಯಿತಂದೆಗಳನ್ನು ಗೌರವದಿಂದ ಕಂಡು ಅವರ ಸೇವೆ ಮಾಡಬೇಕು. ಅದಕಿಂತ ಮೇಲಾಗಿ ಪತಿ ಸೇವೆಯಲ್ಲಿ ನಿರತಳಾಗಬೇಕು.

"ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ, ಪೆಣ್ಣಲ್ಲವೆ ಪೊರೆದವಳು. ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು; ಕುವರನಾದೊಡೆ ಬಂದ ಗುಣವೇನದರಿಂದ ಕುವರಿಯಾದೊಡೆ ಕುಂದೇನು.

ಇವರ್ವರ್ಗರೊಳೇಳ್ಗೆ ಪಡೆದು ಅವರಿಂದ ಸವಿಸಿಪುದು ಇಹಪರಸೌಖ್ಯ' ಎಂದು ಹಾಡಿದ್ದಾಳೆ ಹೆಣ್ಣಿಗೆ ಗೌರವ ಕೊಡಬಾರದೆ? ಅಂತ ಮೂದಲಿಸುವಳು. ಸುಗುಣನಾದವನ, ಸುಂದರವಾದವನ, ಸುಚರಿತ್ರನಾದವನ, ಸದ್ವಂಶದಲ್ಲಿ ಹುಟ್ಟಿದವನನ್ನು ಆರಿಸಿ ಮಗಳನ್ನು ಕೊಡುವುದು ಉತ್ತಮ ಎಂಬುದು ಆಕೆಯ ನಿರೂಪ. ಹಣದಾಶೆಗೋಸುಗ ಹೆಣ್ಣುಗಳನ್ನು ಮಾರಬಾರದು ಎನ್ನುವಳು. ಕಡು ಮೂರ್ಖನಿಗೆ, ಗಾಂಪನಿಗೆ, ಮತಿ ಇಲ್ಲದವನಿಗೆ, ಬಡತನದೊಳು ಬಲುಬವಣೆಗೊಂಡವನಿಗೆ ಕೊಡಲಾಗದು ಕುವರಿಯನು—ಎಂದು ಎಚ್ಚರಿಸುತ್ತಾಳೆ ಹೀಗೆ ಮಾಡದಿದ್ದರೆ ಸಂಸಾರ ನಿಸ್ಸಾರವಾಗುವುದು ದುರ್ಗತಿ ಹಿಡಿಯುವುದು ನೆಂಟರಿಷ್ಟರೊಡನೆ ವಿಶ್ವಾಸದಿಂದ ಹೆಣ್ಣು ನಡಕೊಳ್ಳಬೇಕು. ಕೆಟ್ಟ ಮಾತು ಆಡಬಾರದು; ಸಿಟ್ಟುಸೆಡುಗಳ ತೊರೆಯಬೇಕು. ಮನೆಕೆಲಸ ಶ್ರದ್ಧೆಯಿಂದ ಮಾಡಬೇಕು, ಚೊಕ್ಕಟವಾಗಿಟ್ಟುಕೊಂಡಿರಬೇಕು. ಶುಚಿ ರುಚಿ ಅಂತು ಅಡುಗೆಮಾಡಿ ಶ್ರದ್ಧೆಯಿಂದ ಬಡಿಸಬೇಕು. ಬಡವರಿಗೆ ಭಿಕ್ಷೆನೀಡಬೇಕು. ಗುರುಗಳ ಸೇವೆ ಮಾಡಬೇಕು. ಇವೇ ಮೊದಲಾದ ಸಜ್ಜನಿಕೆಯನ್ನು ಸಾರುವಳು. ಗಂಡನ ಇಚ್ಛೆಯಂತೆ ಅವನ ಇಂಗಿತವನ್ನರಿತು ನಡೆದುಕೊಳ್ಳಬೇಕು. ದೇವರ ಸೇವೆ ಭಕ್ತಿಭಾವದಿಂದ ಮಾಡಬೇಕು. ಅದಕ್ಕಿಂತ ಮಿಗಿಲಾದ್ದು ಪತಿಸೇವೆ; ಪತಿ ಸೇವೆಯೇ ಪರಮಾತ್ಮನ ಸೇವೆ ಎಂದು ಸಾರಿಸಾರಿ ಹಾಡಿದ್ದಾಳೆ ತನ್ನ ಸಾಂಗತ್ಯದಲ್ಲಿ. ಸದಾಚಾರ ಸದ್ಧರ್ಮಕ್ಕೆ ದಾರಿದೀಪ. ತನ್ನ ಮನೆಯ ಬಡತನ, ತನ್ನ ಇನಿಯನ ತಪ್ಪುಗಳ ಬೇರೆಯವರೊಡನೆ ಹೇಳಬಾರದು. ಸಮಾಧಾನದಿಂದ ತಿದ್ದಲು ಪ್ರಯತ್ನಪಡಬೇಕು. ಅತಿಥಿಗಳನ್ನು ಸತ್ಕರಿಸಬೇಕು ಕೆಟ್ಟ ಹೆಣ್ಣುಗಳ ಸಹವಾಸ ಮಾಡಬಾರದು, ದುಸ್ಸಂಗ ಕೂಡದು. ಇಂಥ ಸಾಧ್ವಿ ಸತಿಯರ ಧರ್ಮ ಶಾಶ್ವತಮುಕ್ಕೆ, ಪತಿ ಒಲವಕ್ಕೆ, ಸತಿಯರ ಮಹಿಮೆ ಸಕಲ ಜಗದೊಳು ನಿಲ್ಕೆ, ಸತಿಯರಿಗೆ ಪತಿಪಾದ ಭಕ್ತಿ ನಿಶ್ಚಲವಿರಲಕ್ಕೆ, ಸತಿಪತಿಯರು ಸೌಖ್ಯದೊಳಿರಲಕ್ಕೆ. ಈ ಸಾಂಗತ್ಯ ಸತ್ಕೃತಿಯನ್ನು ಹೊನ್ನಮ್ಮ ರಚಿಸಿ ಕನ್ನಡ ಸಾಹಿತ್ಯ ಶ್ರೀಮಂತಗೊಳಿಸಿದ್ದಾಳೆ ಮುನ್ನೂರು ಐವತ್ತು ವರುಷಗಳ ಹಿಂದೆಯೇ ಹೆಣ್ಣಿನ ಹಿರಿಮೆ ಬಣ್ಣಿಸಿರುವುದು ನಮ್ಮ ಭಾಗ್ಯ. ಆಕೆ ಹೆಚ್ಚು ವಿದ್ಯೆ ಕಲಿತವಳಲ್ಲ; ದೇವತೆಗಳ ವರಪಡೆದವಳಲ್ಲ, ಗುರುಸೇವೆ ಸಲ್ಲಿಸಿ ಈ ಸತಿಧರ್ಮ ಸಾರ ಕೊಟ್ಟಿದ್ದಕ್ಕೆ ನಾವು ಋಣಿಗಳಾಗಿರಬೇಕಲ್ಲವೆ?

"ಕನ್ನಡ ನಾಡೊಳು ಕಲಿಯುಗ ಪುಗ-
ದಿರ್ಕೆ, ಕನ್ನಡಿಗರು ಘನರಕ್ಕೆ। ದೇವಗಿರಿ
ಪ್ರಸಂತತಿ ಸಂತಸದೊಳಿರ್ಕೆ, ಗೋವಿಂದ
ಗಾನಂದಮುಕ್ಕೆ। ಮಳೆಯುಕ್ಕೆ ಕಾಲಕಾಲಕೆ
ದೈವದೊಲವಿಂದ ಬೆಳೆಗೈಗೆ ಪೆರ್ಚಿಗೆಯುಕ್ಕೆ।
ಇಳೆಯೊಳು ಪತಿಪುತ್ರ ಪೌತ್ರ ಸಂಪದ
ದೊಡನೆ ಎಳಮಂಡಿದೊಪ್ಪುದೊಳಿರ್ಕೆ ॥"

ಧರ್ಮದ ತನಿಗಂಪು ತಳೆದೋರೆ ಕಾವ್ಯದ
ಸರ್ವಜೀವರಿಗಿಸುಬತ್ತೀಸೆ।
ನಿರ್ಮಲ ಸತಿಯರ ಧರ್ಮವ ಕೃತಿಯಾಗಿ
ನಿರ್ಮಿಸಿ ನೆಗಳಿಪೆನೆಂದು।

ಹದಿಬದೆಯ ಧರ್ಮಕ್ಕೆ ಜಯವಾಗಲಿ।
ಹೊನ್ನಮ್ಮನ ಸಾಂಗತ್ಯಕ್ಕೆ ಜಯವಾಗಲಿ

**ಬಿ. ಎಸ್. ರಾಮಾಚಾರ್ಯ**

# ವಾರ್ತಾಲಹರಿ

## ತಿರುಚಾನೂರಿನಲ್ಲಿ ಶ್ರೀಪದ್ಮಾವತೀ ಅಮ್ಮನವರ ಕೋಟಿ ಕುಂಕುಮಾರ್ಚನೆ

ತಿರುಚಾನೂರು ಶ್ರೀಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಜುಲೈ 18 ರಿಂದ ಆಗಸ್ಟ್ 7 ರ ವರೆಗೆ ಲೋಕ ಕಲ್ಯಾಣಾರ್ಥವಾಗಿ ಕೋಟಿ ಕುಂಕುಮಾರ್ಚನೆ ನಡೆಸಲು ನಿಶ್ಚಯಿಸಲಾಗಿದೆ. 21 ದಿನಗಳ ಪರ್ಯಂತ ನಡೆಯುವ ಈ ಅರ್ಚನೆಗೆ 5000 ರೂ ಶುಲ್ಕ ನೀಡುವ ಗೃಹಸ್ಥರ ಹತ್ತು ಮಂದಿಗೆ ಅಷ್ಟೂದಿನವೂ ಸೇವೆಯಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು. ಭಕ್ತರು ಒಂದುದಿನಕ್ಕೆ 300 ರೂಗಳಂತೆ ಶುಲ್ಕ ನೀಡುವುದರಿಂದ ಇಬ್ಬರು ಸೇವೆಯಲ್ಲಿ ಭಾಗವಹಿಸಬಹುದು ಎಂದು ವರದಿಯಾಗಿದೆ.

## ಯಾತ್ರಿಕ ಸೌಕರ್ಯಾಭಿವೃದ್ಧಿ

ತಿರುಪತಿಯ ಅಲಿಪಿರಿಯ ಬಳಿ 150 ಕೋಣೆಗಳ ಸತ್ರವನ್ನು ಸುಮಾರು 50 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲು ತೀರ್ಮಾನಿಸಲಾಗಿದೆ. ತಿರುಮಲೆಯಲ್ಲಿನ ವಸತಿಗೃಹಗಳಲ್ಲಿನ ಬೆಡ್‌ಷೀಟ್‌ಗಳನ್ನು ಒಗೆಯಲು ಒಂದು ಹೊಸ ಯಂತ್ರವನ್ನು ಕೊಳ್ಳಲಾಗುವುದು. ಈ ಯಂತ್ರವು ದಿನವೊಂದಕ್ಕೆ ಇಪ್ಪತ್ತು ಸಾವಿರ ಬೆಡ್‌ಷೀಟ್‌ಗಳನ್ನು ಪರಿಶುಭ್ರಗೊಳಿಸಿ ನೀಡುವ ಸಾಮರ್ಥ್ಯ ಹೊಂದಿರುತ್ತದೆ ಎಂದು ವರದಿಯಾಗಿದೆ.

ತಿರುಮಲೆಯ ಪರಿಸರವನ್ನು ಸಸ್ಯಶ್ಯಾಮಲಗೊಳಿಸುವ ಮೂರುವರ್ಷದ ತರು ಸೌಂದರ್ಯ ಯೋಜನೆಯನ್ನು 4.5 ಕೋಟಿರೂಗಳ ಅಂದಾಜು ವೆಚ್ಚದಲ್ಲಿ ಕೈಗೆತ್ತಿಕೊಳ್ಳಲಾಗುವುದು.

ಈ ವಿಷಯಗಳನ್ನು ಪತ್ರಕರ್ತರೊಂದಿಗೆ ಮಾತನಾಡುತ್ತ ತಿ. ತಿ. ದೇ. ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಅವರು ತಿಳಿಸಿದರೆಂದು ವರದಿಯಾಗಿದೆ.

## ನಿತ್ಯ ಅನ್ನದಾನ ಯೋಜನೆಗೆ ಹತ್ತು ಲಕ್ಷರೂ ವಂತಿಗೆ

ಬೆಂಗಳೂರಿನ ಶ್ರೀ ಕೆ. ಸೂರ್ಯನಾರಾಯಣ ಅವರು ತಿರುಮಲೆಯ ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಯೋಜನೆಗೆ ಹತ್ತು ಲಕ್ಷರೂಗಳ ವಂತಿಗೆಯನ್ನು ನೀಡಿದ್ದಾರೆ. ಶ್ರೀಯುತರು ಈ ಮೊತ್ತದ ಚೆಕ್‌ಅನ್ನು ತಿ. ತಿ. ದೇ. ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಅವರ ಕೈಗೆ ಒಪ್ಪಿಸಿದ್ದಾರೆ. ಇದರಿಂದಾಗಿ ನಿತ್ಯಾನ್ನದಾನ ಯೋಜನೆಗೆ ದಾನಿಗಳಿಂದ ಒಟ್ಟು 1.20 ಕೋಟಿ ರೂಗಳ ವಂತಿಗೆ ಸಂದಂತೆ ಆಗಿದೆ. ಈ ವಂತಿಗೆ ಹಣಕ್ಕೆ ಸಮನಾದ ಹಣವನ್ನು ತಿ. ತಿ. ದೇ. ಗಳು ಸೇರಿಸಿ, ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿ ಆಗಿಟ್ಟು, ಬರುವ ಬಡ್ಡಿ ಹಣದಿಂದ ತಿರುಮಲೆಯ ಯಾತ್ರಿಕರಿಗೆ ಪ್ರತಿದಿನವೂ ಉಚಿತ ಭೋಜನವನ್ನು ನೀಡುತ್ತಿದ್ದು, ಹೆಚ್ಚಿನ ವಂತಿಗೆಯನ್ನು ಆಕರ್ಷಿಸಲು, ಹಾಗೂ ಹೆಚ್ಚಿನ ಭಕ್ತರನ್ನು ಯೋಜನೆಯಲ್ಲಿ ತೊಡಗಿಸಿ ಕೊಳ್ಳಲು ತಿ. ತಿ. ದೇ ಈಚೆಗೆ ದಾನಿಗಳು ನೀಡಬೇಕಾದ ವಂತಿಗೆ ಹಣದ ಮೊತ್ತವನ್ನು ಕಡಮೆಗೊಳಿಸಿದೆ. ಅದರಂತೆ ಭಕ್ತರು ಒಂದುಸಾವಿರ ಅಥವಾ ಅದರ ಗುಣಕಗಳಲ್ಲಿಯೂ ವಂತಿಗೆ ನೀಡಬಹುದು. ವಂತಿಗೆ ಹಣವನ್ನು ಕಾರ್ಯನಿರ್ವಹಣಾಧಿಕಾರಿ ತಿ. ತಿ. ದೇ. ತಿರುಪತಿ ಇವರಿಗೆ ಕಳುಹಿಸಬೇಕೆಂದು ಕೋರಲಾಗಿದೆ.

## ತಿರುಮಲೆಯಲ್ಲಿ ಆಂಧ್ರಪ್ರದೇಶದ ಮುಖ್ಯಕಾರ್ಯದರ್ಶಿ

ದಿನಾಂಕ 21–5–88 ರಂದು ಆಂಧ್ರಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ಶ್ರಾವಣಕುಮಾರ ಅವರು ತಿರುಮಲೆಗೆ ಆಗಮಿಸಿದರು. ಅವರು ತಿರುಪತಿಯಿಂದ ಕಾಲು ಹಾದಿಯಲ್ಲಿ ಬೆಟ್ಟವನ್ನೇರಿ 25–00 ರೂಗಳ ಸಾಲಿನಲ್ಲಿ ಬಂದು ಸ್ವಾಮಿಯನ್ನು ಆರಾಧಿಸಿದರು. ಸ್ವಾಮಿ ದರ್ಶನಾನಂತರ ಅವರು ತಿರುಮಲೆಯ ಹಲವಾರು ಪ್ರದೇಶಗಳ ಪರಿವೀಕ್ಷಣೆ ನಡೆಸಿ ಶ್ರೀ ನಾರಾಯಣಗಿರಿ ಅತಿಥಿಗೃಹದ ಬಳಿ ಒಂದು ಸಸಿಯನ್ನು ನೆಟ್ಟರು. ಅವರೊಂದಿಗೆ ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಸಿ ಎಚ್. ವೆಂಕಟಪತಿರಾಜು, ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್, ಭದ್ರತಾ ಅಧಿಕಾರಿ ಶ್ರೀ ಎಸ್. ಕೆ. ಜಯಚಂದ್ರ, ಚಿತ್ತೂರು ಜಿಲ್ಲಾಧಿಕಾರಿ ಶ್ರೀ ವಿಶ್ವನಾಥ' ಮೊದಲಾದವರಿದ್ದರು.

## ತಿರುಮಲೆಯಲ್ಲಿ ಭಾರತದ ಉಪರಾಷ್ಟ್ರಪತಿ

ಭಾರತದ ಉಪರಾಷ್ಟ್ರಪತಿ ಡಾ॥ ಶಂಕರ ದಯಾಳಶರ್ಮರು ತಮ್ಮ ಧರ್ಮಪತ್ನಿ ವಿಮಲಾ ಶರ್ಮ ಅವರೊಂದಿಗೆ ತಿರುಮಲೆಗೆ ಆಗಮಿಸಿ ಮೂರು ದಿನಗಳ ಕಾಲವಿದ್ದು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಆರಾಧಿಸಿದರು.

ಉಪರಾಷ್ಟ್ರಪತಿ ದಂಪತಿಗಳು 7–6–88 ರಂದು ಆಗಮಿಸಿ ಬುಧವಾರ ಸಹಸ್ರಕಲಶಾಭಿಷೇಕವನ್ನು ಗುರುವಾರ ಸುಪ್ರಭಾತ, ತೋಮಾಲೆಸೇವೆ, ತಿರುಪ್ಪಾವಡಾ, ಪೂಲಂಗಿಸೇವೆಗಳಲ್ಲೂ, ಶುಕ್ರವಾರ ಅಭಿಷೇಕ, ಕಲ್ಯಾಣೋತ್ಸವಗಳಲ್ಲೂ ಭಾಗವಹಿಸಿದ್ದರು.

ಡಾ॥ ಶರ್ಮ ದಂಪತಿಗಳು ತಿರುಮಲೆಯ ಮೈಕ್ರೋವೇವ್ ಕೇಂದ್ರದ ಬಳಿಯ ಶ್ರೀ ಸ್ವಾಮಿಪಾದಗಳ ದರ್ಶನವನ್ನು ಪಡೆದರು. ಪಾಪನಾಶನಂ ಬಳಿ ತಮ್ಮ ತಿರುಮಲೆಯ ಯಾತ್ರೆಯ ನೆನಪಿನಲ್ಲಿ ಹೊಸ ಗಿಡವೊಂದನು ನೆಟ್ಟರು.

ಉಪರಾಷ್ಟ್ರಪತಿ ದಂಪತಿಗಳನ್ನು ತಿ. ತಿ. ದೇ. ಶ್ರೀ ಸಿಂಹಾದ್ರಿ ಸತ್ಯನಾರಾಯಣ (ದೇವಾಲಯ ಇಲಾಖಾ ಮಂತ್ರಿ) ಕಾರ್ಯ ನಿರ್ವಹಣಾಧಿಕಾರಿ ಶ್ರೀ ಸಿ. ಎಚ್ ವೆಂಕಟಪತಿರಾಜು ಮೊದಲಾದವರು ಸ್ವಾಗತಿಸಿದರು. (ಚಿತ್ರಗಳನ್ನು ಒಳಭಾಗದ ರಕ್ಷಾಪುಟಗಳಲ್ಲಿ ಕಾಣಬಹುದು)

## ಹೈದರಾಬಾದಿನಲ್ಲಿ ದಾಸಸಾಹಿತ್ಯ ಶಿಕ್ಷಣ ಶಿಬಿರ

ಹೈದರಾಬಾದಿನ ಬಾಗಲಿಂಗಂಪಲ್ಲಿಯಲ್ಲಿ ಶ್ರೀ ರಾಘವೇಂದ್ರಸ್ವಾಮಿ ವೃಂದಾವನ ಸಮಿತಿ ಹಾಗೂ ತಿ. ತಿ ದೇ. ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ 1–6–88 ರಿಂದ 7–6–88 ರವರಿಗೆ ದಾಸಸಾಹಿತ್ಯ ಹಾಗೂ ತತ್ತ್ವಗಳ ದೀಕ್ಷಿಗೆ ಶಿಕ್ಷಣ ಶಿಬಿರವು ನಡೆದು ಯಶಸ್ವಿಯಾಯಿತು.

ದಿನಾಂಕ 1–6–88 ರಂದು ಬೆಳಗ್ಗೆ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀ ಪಾದಂಗಳವರು (ಪೇಜಾವರ

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು. ಐ ಎ ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿವೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,

**(ಸಿ. ಎಚ್. ವೆಂಕಟಪತಿರಾಜು)**

ಮಠ) ಶಿಕ್ಷಣಶಿಬಿರದ ಉದ್ಘಾಟನೆ ಮಾಡುತ್ತ ಇಲ್ಲಿ ಶಿಕ್ಷಣ ಪಡೆದವರು ತಮ್ಮ ಕಾರ್ಯ ಕ್ಷೇತ್ರದಲ್ಲಿ ದಾಸಸಾಹಿತ್ಯ ಸೌರಭವನ್ನು ಹರಡುವಂತೆ ಆಗಲಿ ಎಂದು ಹಾರೈಸಿದರು. ಆಂಧ್ರಪ್ರದೇಶದ ಹೆಚ್ಚುವರಿ ಪೋಲೀಸು ಮಹಾನಿರ್ದೇಶಕ ಶ್ರೀ ವಿ. ಶ್ರೀನಿವಾಸರಾವ್ ಐ ಪಿ. ಎಸ್. ಅವರು ಮುಖ್ಯ ಅತಿಥಿಗಳಾಗಿ ಮಾತನಾಡುತ್ತ ದಾಸಸಾಹಿತ್ಯದ ಸರಳತೆಯನ್ನು ಸರ್ವಂಕಷತ್ವವನ್ನು ವಿವರಿಸಿ ಈ ವಿಶ್ವ ಸಾಹಿತ್ಯದ ಬಗ್ಗೆ ಪ್ರಚಾರ ಹೆಚ್ಚು ಹೆಚ್ಚು ದೊರೆಯುವಂತೆ ಆಗಿ ಸಾರ್ವತ್ರಿಕ ಜೀವನ ಶ್ರೇಷ್ಠತರವಾಗುವಂತೆ ಆಗಬೇಕು. ಆದಕ್ಕಾಗಿ ಇಲ್ಲಿನ ಶಿಕ್ಷಕ ವಿದ್ಯಾರ್ಥಿಗಳು ಶ್ರಮಿಸಬೇಕು ಎಂದು ಕರೆ ನೀಡಿದರು.

ಪ್ರತಿದಿನವೂ ಬೆಳಗ್ಗೆ ಶ್ರೀ ವೆಂಕಟನರಸಿಂಹಾಚಾರ್ಯಕೊಪ್ಪರ ಅವರು ಶ್ರೀ ಗುರುಜಗನ್ನಾಥ ದಾಸರು ಹಾಗೂ ವರದೇಶವಿಠಲರು ಚಿತ್ರಿಸಿದ ಪ್ರಹ್ಲಾದ ಚರಿತೆಯನ್ನೂ, ಶ್ರೀ ಮುರಳೀಧರ ಆಚಾರ್ಯ ಗಲಗಲಿಯವರು ಹರಿದಾಸಸಾಹಿತ್ಯದ ಸ್ಥಾನ, ಸಮರ್ಪಣೆ, ಭಕ್ತಿ ಭಾವಗಳನ್ನೂ, ಶ್ರೀ ಕೆ. ಅಪ್ಪಣ್ಣಾಚಾರ್ಯರು (ವಿಶೇಷಾಧಿಕಾರಿ, ದಾಸಸಾಹಿತ್ಯಪ್ರಾಜೆಕ್ಟ್ ತಿ. ತಿ. ದೇ.) ಹರಿದಾಸರುಗಳ ಜೀವನ ಚರಿತ್ರೆಗಳನ್ನೂ ವಿವರಿಸಿದರು.

ದಿನವೂ ಮಧ್ಯಾಹ್ನ ಶ್ರೀ ಕಟಗೇರಿ ಅನಂತಾಚಾರ್ಯರು ದಾಸಸಾಹಿತ್ಯದ ಸಂಗೀತ ಪಾಠ ಮಾಡಿದರು.

ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀ ಪಾದಂಗಳವರು (ಪೇಜಾವರ ಮಠ) ದಿನವೂ ಸಂಜೆ ಹರಿಕಥಾಮೃತಸಾರದ ಕರುಣಸಂಧಿಯ ಬಗ್ಗೆ ಉಪನ್ಯಾಸ ಮಾಡಿದರು. ಶ್ರೀ ಪುಷ್ಕರಾಚಾರ್ಯ ಮಳಗಿ ಅವರು ಶ್ರೀಲಕ್ಷ್ಮೀ ಶೋಭಾನೆಯ ಸಾಹಿತ್ಯಕ ಗುಣ, ಆಂತರಿಕ ಮೌಲ್ಯಗಳನ್ನು ವಿವರಿಸಿದರು.

4–6–88 ರಂದು ಹತ್ತುವರ್ಷದ ಬಾಲಕಿ ಕುಮಾರಿ ಸಂಗೀತಾಕಾಖಂಡಕಿ ದಾಸಸಾಹಿತ್ಯದ ಕೃತಿಗಳನ್ನು ಹಾಡಿ ಉತ್ಕೃಷ್ಟ ಸಂಗೀತ ಸಭೆಯನ್ನು ನಡೆಸಿಕೊಟ್ಟು ಶಿಕ್ಷಣಾರ್ಥಿಗಳಿಗೆ ಸ್ಫೂರ್ತಿಯನ್ನು ತುಂಬಿದರು ಪ್ರಭಾತಕಲಾವಿದರು 5–6–88 ರಂದು ದಾಸಸಾಹಿತ್ಯಕ ಕೃತಿಗಳ ತಮ್ಮ ನೃತ್ಯ ರೂಪಕಗಳಿಂದ ರಂಜಿಸಿದರು.

ಶಿಕ್ಷಣಾರ್ಥಿಗಳಿಗೂ ಉಪನ್ಯಾಸಕರಿಗೂ ವಂದನೆಗಳನ್ನು ಅರ್ಪಿಸುತ್ತ ಶ್ರೀ ರಾಘವೇಂದ್ರ ರಾವ್ (ತಜ್ಞ ಸಲಹಾ ಸಮಿತಿ ಸದಸ್ಯರು ತಿ.ತಿ ದೇ.

ದಾಸಸಾಹಿತ್ಯ ಪ್ರಾಜೆಕ್ಟ್) ಈ ಶಿಬಿರದ ಫಲ ಮುಂದಿನದಿನಗಳಲ್ಲಿ ದಾಸಸಾಹಿತ್ಯದ ಹರಡುವಿಕೆ ಯಲ್ಲಿ ಕಂಡು ಬರುವಂತಾಗಲಿ ಎಂದು ಹಾರೈಸಿದರು.

ಶಿಕ್ಷಣ ಶಿಬಿರದಲ್ಲಿ ತಿ.ತಿ.ದೇ. ಗಳ ಧಾರ್ಮಿಕ ಪುಸ್ತಕ, ಧ್ವನಿಸುರುಳಿಗಳ ಮಾರಾಟ ವ್ಯವಸ್ಥೆಯೂ ಇದ್ದು ಜನಪ್ರಿಯವಾಯಿತು.

## ತಿರುಮಲೆಯಲ್ಲಿ ಕರ್ನಾಟಕದ ಮುಖ್ಯಮಂತ್ರಿ

ಕರ್ನಾಟಕದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ, ಅವರ ಧರ್ಮಪತ್ನಿ ಶ್ರೀಮತಿ ಶಕುಂತಲಾ ಹೆಗಡೆ, ಲೋಕ ಸಭೆಯ ಪ್ರತಿಪಕ್ಷ ನಾಯಕ ಶ್ರೀ ಮಧು ದಂಡವತೆ, ಹಾಗೂ ಬಿಜು ಪಟ್ನಾಯಕ ಅವರುಗಳು 27-5-88 ರಂದು ತಿರುಮಲೆಗೆ ಆಗ ಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. 25-00 ರೂಗಳ ಸಾಲಿನಲ್ಲಿ ದೇವಾಲಯವನ್ನು ಪ್ರವೇಶಿಸಿದ ಮುಖ್ಯಮಂತ್ರಿ ತಂಡಕ್ಕೆ ತಿ ತಿ. ದೇ. ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್, ಭದ್ರತಾಧಿಕಾರಿ ಶ್ರೀ ಎಸ್. ಕೆ. ಜಯಚಂದ್ರ ಮುಂತಾದ ಅಧಿಕಾರಿಗಳು ಸ್ವಾಗತ ನುಡಿದರು. ದರ್ಶನಾನಂತರ ಮುಖ್ಯ ಮಂತ್ರಿಗಳಿಗೆ ಅರ್ಚಕರು ಕನ್ನಡದಲ್ಲಿ ತಿರುಮ ಲೆಯ ಇತಿಹಾಸವನ್ನು ದೇವಾಲಯದ ವಿವರಗ ಳನ್ನೂ ತಿಳಿಸಿದರು. ಸ್ವಾಮಿಪ್ರಸಾದವನ್ನು ಅವರಿಗೆ ಆಶೀರ್ವಾದ ಪೂರ್ವಕ ನೀಡಲಾಯಿತು.

ತಿರುಮಲೆಯ ಶ್ರೀ ಪದ್ಮಾವತಿ ಅತಿಥಿಗೃಹದಲ್ಲಿ ಶ್ರೀ ಹೆಗಡೆ ದಂಪತಿಗಳು ತಂಗಿದ್ದರು



ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ

ಶ್ರೀ ರಾಮಕೃಷ್ಣ ಹೆಗಡೆ ದಂಪತಿಗಳು

## ತಿರುಮಲಿಯಲ್ಲಿ ಕಂಚಿ ಆಚಾರ್ಯ ಶ್ರೀ ಶ್ರೀ ಜಯೇಂದ್ರಸರಸ್ವತಿಸ್ವಾಮಿಗಳು

ಜೂನ್ 3 ರಂದು ಶುಕ್ರವಾರ ಬೆಳಗ್ಗೆ ತಿರುಮಲೆ ಯಲ್ಲಿ ಸ್ವಾಮಿ ಅಭಿಷೇಕದಲ್ಲಿ ಕಂಚಿಯ ಆಚಾರ್ಯ ಶ್ರೀ ಶ್ರೀ ಜಯೇಂದ್ರಸರಸ್ವತಿ ಸ್ವಾಮಿಗಳು ಭಾಗ ವಹಿಸಿದ್ದರು.

ಸ್ವಾಮಿಗಳನ್ನು ಬೋರ್ಡ್‌ಸದಸ್ಯರು ಶ್ರೀ ಐ. ಎಲ್. ಎನ್. ಶಾಸ್ತ್ರಿ, ಡೆಪ್ಯೂಟಿ ಇ. ಓ. ಶ್ರೀ ಮುನಿಕೃಷ್ಣನ್ ಮೊದಲಾದವರು ಆಲಯ ಮರ್ಯಾದೆ ಯಂತೆ ಸ್ವಗಸಿದರು. ದೇವಾಲಯದ ಬಳಿ ಸ್ವಾಮಿಯ ಶಠಗೋಪಸ್ವಾಗತ ನಂತರ ಆಚಾರ್ಯರು ಶ್ರೀನಿವಾಸನನ್ನು ದರ್ಶಿಸಿದರು. ಪಂಚೆ, ಮೇಲ್ವಸ್ತ್ರ, ಕೌಪೀನ, ಪ್ರಸಾದಗಳನ್ನು ಸ್ವಾಮಿಗಳಿಗೆ ನೀಡಲಾಯಿತು.



★

**ಮುಂದಿನ ಸಂಚಿಕೆಯಲ್ಲಿ .... .... .**

**ಸಪ್ತಗಿರಿ. — ಆಗಸ್ಟ್ 1988**

**ಅತ್ರಿ–ಅನಸೂಯಾ**
– ಪಂಡರೀನಾಥಾಚಾರ್ಯ ಗಲಗಲಿ

**ನ್ಯಾಸವಿದ್ಯಾಪ್ರತಿಪಾದನ**
– ಡಿ. ಕೃಷ್ಣ ಅಯ್ಯಂಗಾರ್

**ಪಂಚಾಯುಧ ಪರಿಚಯ**
– ವಿದ್ವಾನ್ ಬಿ. ಬಾಲಗಣಪತಿ ಭಟ್ಟ

**ಅನ್ನಮಾಚಾರ್ಯನ ಅಂತರಂಗ**
–ವಿದ್ವಾನ್ ಬ. ನ. ಗುಂಡೂರಾವ್

**ಶ್ರೀ ಲಕ್ಷ್ಮೀ**
– ಆದ್ಯರಾಮಾಚಾರ್ಯ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

**ವಿಶೇಷ ಸೂಚನೆ:** ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಆದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಆಗಸ್ಟ್ 1988

| | | |
|---|---|---|
| 5. | ಶುಕ್ರವಾರ | ಆಂಡಾಳ್ ತಿರುವಾಡಿಪ್ಪೂರಂ ಉತ್ಸವಾರಂಭ |
| 11. | ಗುರುವಾರ | ಚಕ್ರತ್ತಾಳ್ವಾರ್ ವರ್ಷತಿರುನಕ್ಷತ್ರ |
| 14. | ಭಾನುವಾರ | ಆಂಡಾಳ್ ತಿರುವಾಡಿಪ್ಪೂರಂ ಉತ್ಸವ ಸಮಾಪ್ತಿ |
| 15. | ಸೋಮವಾರ | ಭಾರತಸ್ವಾತಂತ್ರ್ಯದಿನ |
| 18. | ಗುರುವಾರ | ಕಲ್ಕಿ ಜಯಂತಿ |
| 22. | ಸೋಮವಾರ | ತಿರುಮಲೆಯಲ್ಲಿ ಪವಿತ್ರೋತ್ಸವಾರಂಭ |
| 25. | ಗುರುವಾರ | ತಿರುಮಲೆಯಲ್ಲಿ ಪವಿತ್ರೋತ್ಸವ ಸಮಾಪ್ತಿ |
| 26. | ಶುಕ್ರವಾರ | ವರಲಕ್ಷ್ಮೀವ್ರತ, ಋಗ್ವೇದೋಪಾಕರ್ಮ |
| 27. | ಶನಿವಾರ | ಶ್ರೀವೈಖಾನಸ ಮಹರ್ಷಿಜಯಂತಿ |
| 28. | ಭಾನುವಾರ | ಗಾಯತ್ರೀಜಪ |

# ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಆಗಸ್ಟ್ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

4, 107, 154, 172, 173, 255, 256, 259, 262, 263, 379, 381, 487, 522, 523, 526, 969, 993, 1000, 1010, 1012, 1608, 1610, 1613, ರಿಂದ, 1618, 1621, 1622, 1625, ರಿಂದ 1644, 1646 ರಿಂದ 1663, 1665, ರಿಂದ 1676,

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

## ಋಗ್ವೇದ

ಮೂಲ–ತೆಲುಗು ವ್ಯಾಖ್ಯಾನ.

ನಾಲ್ಕು ಸಂಪುಟಗಳು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

Edited and Published on behalf of the T T Devasthanams by K. Subba Rao, M A., and Printed at T. T. D. Press by M Vijayakumar Reddy, Manager, T. T. D. Press, Tirupati – 517501



Sri Govindaramanuja swami (right side) and Sri Chakravarthi Srinivasacharya swami (left side) who assumed charge as Pedda Jeeyar and Chinna Jeeyar of Jeeyangar

